# ದಂಗೆಕೋರರ ವಿನಾಶ!


































* ಕಾರ್ಬೋಕ್ಸಿಲ್ ಆಸಿಡ್ ಗ್ರೂಪ್‌ನ ಫಾರ್ಮುಲಾ. ಇದು ಹಲ್ಲಿನ ಎನಾಮಲನ್ನು ಆಕ್ರಮಿಸಿ, ನೋಯುವ ಕುಳಿಗಳನ್ನುಂಟುಮಾಡುತ್ತದೆ.

ಹಲ್ಲುಗಳ ದೃಢೀಕರಣಕ್ಕೆ,
ದಂತಕ್ಷಯ ನಿವಾರಣೆಗೆ— ಬಿನಾಕಾ ಫ್ಲೋರೈಡ್.

# ಮೀನಾಳಿಗೆ ಜಾಮೆಟ್ರಿ ಎಂದರೆ ಕಡು ವೈರ-ಆದರೆ ಈಗ ಅದು ಅವಳ ಅಚ್ಚುಮೆಚ್ಚು

ಮೀನಾಳಿಗೆ ಜಾಮೆಟ್ರಿಯಷ್ಟು ಬೇಸರಿಕೆಯನ್ನುಂಟುಮಾಡುವ ಪಾಠ ಬೇರೊಂದಿರಲಿಲ್ಲ.

ಅವಳಿಗೆ ಅದರಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಆ 'ಅಕ್ಯೂಟ್' ಮತ್ತು 'ಅಬ್‌ಟ್ಯೂಸ್' ಆ್ಯಂಗಲ್‌ಗಳು, ಆ ಹೆಕ್ಸಗೋನ್ ಮತ್ತು ಪ್ಯಾರಲೆಲೋಗ್ರಾಮ್‌ಗಳು ಎಂದರೆ ಬರೇ ತಲೆನೋವು— ಅವಳಿಗೆ ಸಾಕುಸಾಕಾಗುತ್ತಿತ್ತು.

ಒಂದು ದಿನ ಒಂದು ವಿಶೇಷ ಸಂಗತಿ ನಡೆಯಿತು! ಅವಳ ಅಣ್ಣ ರಾಜೂ ಅವಳಿಗೆ ಒಂದು ಅಂದವಾದ ಹಳದಿ ಹಾಗೂ ಕಿತ್ತಳೆ ಬಣ್ಣದ, ಬೆಳ್ಳಿಹೊಳಪಿನ ಆಕರ್ಷಕ ಕಂಪಸ್ ಪೆಟ್ಟಿಗೆ ತಂದು ಕೊಟ್ಟನು.

ಮೀನಾ ಆ ಪೆಟ್ಟಿಗೆ ಮತ್ತು ಉಪಕರಣಗಳಿಗೆ ಮಾರು ಹೋದಳು. ಅದೇ ದಿನ ರಾತ್ರಿ ತಾನು ತ್ರಿಕೋಣದ ಶಿಖರವನ್ನೇರಿದ, ವೃತ್ತದೊಳಗೆ ಉರುಳಿದ ಹಾಗೂ ಸ್ಕೇಲ್‌ನಲ್ಲಿ ತೂಗಾಡಿದ ಕನಸು ಕಂಡಳು. ಏನು ಮಜಾ!

ಈಗಂತೂ ಮೀನಾಳಿಗೆ ಜಾಮೆಟ್ರಿ, ಹೆಕ್ಸಗೋನ್ ಮತ್ತು ಪ್ಯಾರಲೆಲೋಗ್ರಾಮ್‌ಗಳೆಂದರೆ ಬಲು ಇಷ್ಟ. ಜಾಮೆಟ್ರಿ ಈಗ ಮೀನಾಳ ಪ್ರೀತಿಪಾತ್ರವಾಗಿದೆ. ಇದು ಆಶ್ಚರ್ಯಕರವಲ್ಲವೆ?







## ಕ್ಯಾಮೆಲ್

ಇನ್‌ಸ್ಟ್ರುಮೆಂಟ್ ಬಾಕ್ಸ್






ಕ್ಯಾಮ್ಲಿನ್ ಪ್ರೈ. ಲಿ.,
ಆರ್ಟ್ ಮಟೀರಿಯಲ್
ಡಿವಿಜನ್,
ಜೆ. ಬಿ. ನಗರ್,
ಬೊಂಬಾಯಿ 400 059.



ಕ್ಯಾಮ್ಲಿನ್‌ನ
ತಯಾರಕರಿಂದ: ತುಂಡಾಗದ ಪೆನ್ಸಿಲುಗಳು

VISION 794 KAN

ಚಂದಮಾಮ ವಾಚಕರು
ಮರೆಯಲಾಗದಿರುವ

# ಧೂಮಕೇತು

(ಶ್ರಿ ವರ್ಣ ಚಿತ್ರಗಳ ದಾರಾವಾಹಿ)

ನಿನ್ನೆ ಓದಿದ ಕಥೆಯನ್ನು ಇಂದು ನೆನಪಿಗೆ ಬಾರದ ವೇಗಪೂರ್ಣವಾದ ಈ ದಿನಗಳಲ್ಲಿ 26 ವರ್ಷಗಳ ಹಿಂದೆ "ಚಂದ ಮಾಮ"ದಲ್ಲಿ ಪ್ರಾರಂಭವಾದ "ಧೂಮ ಕೇತು" ಧಾರಾವಾಹಿಗಾಗಿ ನಮ್ಮ ಓದುಗರು ಅನೇಕ ವರ್ಷಗಳಿಂದ ಮತ್ತೆ ಮತ್ತೆ ಕೇಳುತ್ತಿದ್ದಾರೆ. ಈ ಕಾಲು ಶತಮಾನ ಕಾಲದಲ್ಲಿ "ಚಂದ ಮಾಮ"ದ ಪ್ರಚಾರವು ಪ್ರತಿಗಳ ಸಂಖ್ಯೆಯಲ್ಲಿಯೂ, ಭಾಷೆಗಳ ಸಂಖ್ಯೆಯಲ್ಲಿಯೂ ಎಷ್ಟೋ ಹೆಚ್ಚಿದೆ. ಆದುದರಿಂದ ಆ ಧಾರಾವಾಹಿಯನ್ನು 1980 ಜೂನ್ ಸಂಚಿಕೆಯಿಂದ ಮತ್ತೆ ಪ್ರಕಟಿಸುತ್ತೇವೆ. ಇನ್ನೊಂದು ವಿಶೇಷವೇನೆಂದರೆ ಇದರೊಂದಿಗೆ ಪ್ರಕಟಿಸುವ ಚಿತ್ರಗಳು ಸ್ವರ್ಗೀಯರಾದ "ಚಿತ್ರಾ" ಅವರವೇ!




# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'
ಸಂಚಾಲಕರು: ನಾಗಿರೆಡ್ಡಿ

ಮಾನವರು ಕಾಡಾಡಿಗಳಾದ ಆಟವಿಕ ಜೀವನದ ದಶೆಯುಲ್ಲಿರುವಾಗ ಬೇರೆ ಬೇರೆ ಗುಂಪುಗಳಾಗಿ, ಆಯಾ ಗುಂಪಿನ ನಾಯಕನ ಕೈಕೆಳಗೆ, ಅವನ ಆಜ್ಞೆಗೂ ಪರಿಪಾಲನೆಗೂ ತಲೆವಾಗಿಕೊಂಡಿದ್ದರು. ಬೇರೆ ಬೇರೆ ಜಾತಿಗಳಿಗೆ ಅದುವೇ ಮೂಲಬೀಜವೆನಿಸಿತು. ಮುಂದೆ ಆ ನಾಯಕನೇ ರಾಜನಾಗಿ, ಕೆಲವಾರು ಗುಂಪುಗಳು ಅವನ ಪ್ರಜೆಗಳಾಗಿ, ಅದೇ ರಾಜ್ಯವಾಗಿ ವಿಸ್ತಾರಗೊಂಡಿತು. ಅಂತಲೇ ರಾಜ್ಯದೊಳಗೆ ಅನೇಕ ಜಾತಿಯವರಿಗೆ ಸ್ಥಾನವಿದೆ. ಹಾಗೆಯೇ ರಾಕ್ಷಸರದೂ ಒಂದು ಜಾತಿಯೇ ಎಂಬ ಪ್ರಜ್ಞೆ ಬರುವಂತಿದೆ ಈ ಸಂಚಿಕೆಯ "ರಾಕ್ಷಸ ಸಮಸ್ಯೆ" ಬೇತಾಳ ಕಥೆ.

## ಅಮರವಾಣಿ

ಇಹ ಯತ್ಕ್ರಿಯತೇ ತತ್ತು ಪರತ್ರೈವೋಪ ಭುಜ್ಯತೆ।
ಸಿಕ್ತ ಮೂಲಸ್ಯ ವೃಕ್ಷಸ್ಯ ಫಲಂ ಶಾಖಾ ಸುದೃಶ್ಯತೇ॥

ಒಂದು ಕಡೆಯುಲ್ಲಿ ಒಳಿತಾದರೆ ಅದರ ಫಲವು ಮತ್ತೊಂದು ಕಡೆಯಲ್ಲಿ ಕಾಣುತ್ತದೆ. ಮರದ ಬುಡಕ್ಕೆ ನೀರು ಸುರಿದರೆ ಕೊಂಬೆಗಳಲ್ಲಿ ಫಲ.

ಸಂಪುಟ: ೬೪ ಏಪ್ರಿಲ್ '೮೦ ಸಂಚಿಕೆ: ೪

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦

CHITRA




**ಎಸ್. ವೇಣುಗೋಪಾಲ್, ಮಚಿಲೀಪಟ್ನ**

ಪ್ರ: ಭೂಮಿಯ ಆಕರ್ಷಣೆಯ ಪರಧಿಯನ್ನು ದಾಟಿದ ವಸ್ತು ಅಂತರಿಕ್ಷದಲ್ಲೇ ಇರುತ್ತದೆಂದು ಹೇಳುತ್ತಾರಲ್ಲವೆ? ಹಾಗಾದರೆ ಸ್ಕೈಲಾಬ್ ಹಿಂದಿರುಗುತ್ತ ಈ ಆಕರ್ಷಣೆಯ ಪರಿಧಿಗೆ ಹೇಗೆ ಬಂತು?

ಉ: ಭೂಮಿಯ ಆಕರ್ಷಣೆಯನ್ನು ನಿಜಕ್ಕೂ ದಾಟಿ ಹೋದ ವಸ್ತು ಚಂದ್ರನ ಆಕರ್ಷಣೆಗೆ ಒಳಗಾಗುತ್ತದೆ. ಆಗ ಅದು ಚಂದ್ರನ ಆಕರ್ಷಣೆಯ ಫಲಿತವಾಗಿ ಪಡೆಯುವ ವೇಗಕ್ಕೆ ತಕ್ಕ ಹಾಗೆ ಚಂದ್ರನ ಸುತ್ತಲೂ ತಿರುಗುತ್ತಾ, ಚಂದ್ರನ ಉಪಗ್ರಹದ ಹಾಗೆ ಇದ್ದು ಬಿಡುತ್ತದೆ. ವೇಗವು ಅತೀ ಹೆಚ್ಚಾಗಿ ಬಿಟ್ಟರೆ ಸೂರ್ಯನ ಆಕರ್ಷಣೆಗೆ ಗುರಿಯಾಗಿ ಸೂರ್ಯನ ಸುತ್ತಲೂ ಪರಿಭ್ರಮಿಸಲು ತೊಡಗುತ್ತದೆ.

ಯಾವ ವಸ್ತುವೇ ಆಗಲಿ, ಭೂಮಿಯ ಆಕರ್ಷಣೆಯ ಪರಿಧಿಯನ್ನು ದಾಟಬೇಕಾದರೆ ಅದು ಭೂಮಿಯಿಂದ ಅನೇಕ ಸಾವಿರ ಮೈಲು ದೂರ ಹೋಗ ಬೇಕಾಗುತ್ತದೆ. ಸ್ಕೈಲಾಬ್ ಭೂಮಿಯ ಆಕರ್ಷಣೆಯ ಪರಿಧಿಯೊಳಗೇ ಸುತ್ತಿಕೊಂಡಿದ್ದಿತು. ಆದರೆ ಅದರ ವೇಗವು ಭೂಮಿಯ ಆಕರ್ಷಣೆಯನ್ನು ರದ್ದು ಪಡಿಸುವಂತಹ ಶಕ್ತಿಯುಳ್ಳದಾಗಿತ್ತು. ಆ ಕಾರಣದಿಂದ ಅದು ಭೂಮಿಯ ಸುತ್ತಲೂ ತಿರುಗಿಕೊಂಡಿತ್ತು. ಅದರ ವೇಗವು ಕ್ಷೀಣಿಸುತ್ತಿದ್ದ ಹಾಗೆ ಅದು ಸುತ್ತವಲ್ಲೇ ಸುತ್ತಿಕೊಂಡಿರಲಾಗದೆ ಭೂಮಿಯ ಕಡೆಗೆ ಬರಲು ತೊಡಗಿತು. ಇದರ ಹೊರತು ಬೇರೆ ಕಾರಣವಿರಲು ಸಾಧ್ಯವಿಲ್ಲ. ಭೂಮಿಯ ಸುತ್ತಲೂ ರಾಕೆಟ್ಟಿನ ಸಹಾಯವೇನಿಲ್ಲದೆ ತಿರುಗುವ ವಸ್ತು, ತನ್ನ ವೇಗವನ್ನು ಕಳೆದುಕೊಳ್ಳಲು, ಅದು ತಿರುಗುವ ಕಕ್ಷ್ಯದೊಳಗೆ ಗಾಳಿ ತೆಳುವಾಗಿರುವುದೊಂದು ಕಾರಣವಿರಬಹುದು. ಅಥವಾ ಆಕಾಶದಲ್ಲಿ ಚಲಿಸುವ ಉಲ್ಕೆಗಳ ಏಟಿಗೆ ಗುರಿಯಾಗಿ ವೇಗವು ಕ್ಷೀಣಿಸಿರಬಹುದು.

**ನರೆಡ್ಲ ಸತ್ಯನಾರಾಯಣ, ಗುಂಟೂರು.**

ಪ್ರ: ಡಾರ್ವಿನ್ನನ ಪರಿಣಾಮ ಸಿದ್ಧಾಂತದ ಪ್ರಕಾರ ಕೋತಿಯಿಂದ ಮಾನವನು ಉದ್ಭವಿಸಿದನೆಂದು ತಿಳಿದುಕೊಂಡಿದ್ದೇವೆ. ಆದರೂ ಕೋತಿ ಜಾತಿಗಳು ಈಗಲೂ ಇರುತ್ತವಷ್ಟೆ? ಒಂದು ಕಾಲದಲ್ಲಿ ರಾಕ್ಷಸ ಜಾತಿಯೂ ಇದ್ದುದಾಗಿ ಪುರಾಣ ಕಥೆಗಳಲ್ಲಿ ಓದುತ್ತೇವೆ, ಆ ರಾಕ್ಷಸ ಜಾತಿ ಸ್ವಲ್ಪ ಮಟ್ಟಿಗಾದರೂ ಈಗಲೂ ಇರಬೇಕಲ್ಲವೆ? ಎಲ್ಲಿಯಾದರೂ ಇದೆಯೇನು?

ಉ: ಮನುಷ್ಯನು ಕೋತಿಯಿಂದ ಹುಟ್ಟಿದನೆಂಬುದು ಅಜ್ಜ ಮುತ್ತಜ್ಜಗಳ ಅಭಿಪ್ರಾಯ. ಒಂದಾನೊಂದು ಮೂಲ ಜಾತಿಯಿಂದ ಕೋತಿಗಳೂ ವಾನರಗಳೂ, ಮನುಷ್ಯರೂ ಬೇರೆ ಬೇರೆಯಾಗಿ ಪರಿಣಾಮಗೊಂಡ ಪ್ರಾಣಿಗಳು. ಆ ಮೂಲ ಜಾತಿಯಲ್ಲಿ ಕೆಲವಕ್ಕೆ ವಾನರ ಲಕ್ಷಣಗಳೂ, ಕೆಲವಕ್ಕೆ ಮಾನವ ಲಕ್ಷಣಗಳೂ ಇದ್ದುವೆಂತಲೂ, ಆಯಾ ಲಕ್ಷಣಗಳನ್ನು ಅಭಿವೃದ್ಧಿಗೊಳಿಸಿಕೊಂಡಂಥವು ಕೋತಿಗಳಾಗಿ, ವಾನರಗಳಾಗಿ, ನರವಾನರಗಳಾಗಿ ವಿಭಜನೆ ಹೊಂದಿದುವೆಂತಲೂ ಶಾಸ್ತ್ರಜ್ಞರು ಹೇಳುತ್ತಾರೆ. (ವಾನರಗಳೆಂದರೆ Apes; ಅವುಗಳಿಗೆ ಬಾಲಗಳಿಲ್ಲ. ಹಿಂದಿನ ಕಾಲುಗಳಲ್ಲಿ ನಿಂತು ನಡೆಯ ಬಲ್ಲಂಥವು. ಮುಂದಿನ ಕಾಲುಗಳನ್ನು ಕೈಗಳ ಹಾಗೆ ಉಪಯೋಗಿಸ ಬಲ್ಲಂಥವು.)

ರಾಕ್ಷಸರು ಮಾನವರ ಪರಿಣಾಮ ದಶೆಯಲ್ಲಿ ಒಂದು ದಶೆಯವರಾದರೂ ಆ ಜಾತಿ ಅಂತರಿಸಿ ಹೋದುದರಲ್ಲಿ ಆಶ್ಚರ್ಯವಿಲ್ಲ. ಪರಿಣಾಮ ಹೊಂದದೆ ನಿಂತು ಹೋದ ಕೋತಿ ಜಾತಿಗಳೂ, ವಾನರ ಜಾತಿಗಳೂ ಅಂತರಿಸಿದುವೆಂತಲೇ ಅರ್ಥ.



## ೮೧

**ಭೂ**ತದ ಕಥೆಯನ್ನು ಕೇಳಿ ರಾಜನು ಶಾಸ್ತ್ರಜ್ಞರಾದ ಬ್ರಾಹ್ಮಣರನ್ನು ಕರೆಯಿಸಿ, "ಅಯ್ಯಗಳಿರಾ! ನನಗೊಂದು ಹೆಣ್ಣು ಮಗು ಹುಟ್ಟಿರುತ್ತದೆ. ಅದಕ್ಕೆ ಮೂರು ಮೊಲೆಗಳಿವೆಯೆಂದು ದಾದಿಗಳು ಹೇಳುತ್ತಾರೆ. ಇದು ತುಂಬಾ ಅಶುಭ ಸೂಚಕವೆಂದು ಹೇಳುತ್ತಾರೆ. ಈ ಶಿಶುವಿನ ಜನನದಿಂದಾಗುವ ಅಶುಭಗಳನ್ನು ತಪ್ಪಿಸಿಕೊಳ್ಳಲು ಏನಾದರೂ ಮಾರ್ಗವಿದೆಯೇ?" ಎಂದು ಕೇಳಿದನು.

"ಮಹಾರಾಜಾ! ಅಂಗಲೋಪ ಅಥವಾ ಅಧಿಕಾಂಗಗಳಿಂದ ಹುಟ್ಟುವ ಸ್ತ್ರೀ, ನೀತಿ ನಿಯಮವಿಲ್ಲದೆ ಬದುಕುವವಳಾಗುತ್ತಾಳೆ. ಗಂಡನ ಮರಣಕ್ಕೆ ಕಾರಣಳಾಗುತ್ತಾಳೆ. ಮೂರು ಸ್ತನಗಳಿಂದ ಹುಟ್ಟಿದ ಮಗಳನ್ನು ತಂದೆಯಾದವನು ನೋಡಿದನೆಂದರೆ ಮೂರು ದಿನಗಳೊಳಗೆ ಸಾಯುತ್ತಾನೆ. ಆದ್ದರಿಂದ ಆ ಮಗಳು ನಿಮ್ಮ ಕಣ್ಣಿಗೆ ಬೀಳಲೇ ಬಾರದು. ಪ್ರತ್ಯೇಕ ಭವನದಲ್ಲಿ ಬೆಳೆಯುವಂತೆ ಮಾಡಿರಿ. ಅವಳಿಗೆ ತಕ್ಕ ವಯಸ್ಸು ಬಂದ ಕೂಡಲೇ, ಅವಳನ್ನು ಕೇಳಿದವರಿಗೆ ಕೊಟ್ಟು ಮದುವೆಮಾಡಿ ದೂರ ಕಳುಹಿಸಿಬಿಡಿರಿ. ಹಾಗೆ ಮಾಡಿದರೆ ನಿಮಗೆ ಇಹದಲ್ಲಿ ಅಪಯಶಸ್ಸು ಬಾರದು. ಪರದಲ್ಲಿ ಪಾಪವು ತಟ್ಟದು. ಅದನ್ನು ಬಿಟ್ಟು ಬೇರೆ ಬಗೆಯಾಗಿ ಹುಟ್ಟಿದ ಶಿಶುವನ್ನು ಅಲಕ್ಷ್ಯಮಾಡಿ ಘಾತಿಸುವುದು ವಿಧಿ ನಿಯಮಕ್ಕೆ ವಿರೋಧ." ಎಂದರು ಬ್ರಾಹ್ಮಣರು.

ರಾಜನು ಅವರು ಹೇಳಿದ ಪ್ರಕಾರವೇ ಮಾಡಿದನು. ಮುಂದೆ ಅವಳು ದೊಡ್ಡವಳಾದ ಕೂಡಲೇ, "ಮಹಾರಾಜರಿಗೆ ಹುಟ್ಟಿದ ಮೂರು ಮೊಲೆಗಳ ಕುಮಾರಿಯನ್ನು ಯಾರು ಮದುವೆಮಾಡಿಕೊಳ್ಳುವರೋ ಅವರಿಗೆ ಒಂದು ಲಕ್ಷ ಚಿನ್ನದ ಮೊಹರಿಗಳನ್ನು ಕೊಟ್ಟು, ಗಂಡ ಹೆಂಡಿರನ್ನು ದೇಶದಿಂದ ಬಹಿಷ್ಕರಿಸುತ್ತಾರೆ. ಇದಕ್ಕೆ ಒಪ್ಪುವವರು ಮುಂದೆ ಬರಲಿ" ಎಂದು ಎಲ್ಲೆಲ್ಲೂ ಡಂಗುರ ಸಾರಿಸಲಾಯಿತು.

ಈ ಡಂಗುರದ ಸಮಾಚಾರ ಕೇಳಿ ರಾಜಕುಮಾರಿಯನ್ನು ಮದುವೆಮಾಡಿಕೊಳ್ಳುವೆನೆಂದು ಯಾರೂ ಮುಂದೆ ಬರಲಿಲ್ಲ. ಅನೇಕ ವರ್ಷಗಳೇ ಕಳೆದುವು. ಅವಳನ್ನು ಮದುವೆಮಾಡಿಕೊಂಡರೆ ಮರಣವೇ ಸಂಭವಿಸುತ್ತದೆಂದು ಎಲ್ಲರಿಗೂ ಭಯವೇ, ಆದ್ದರಿಂದ




ಹುಟ್ಟು ದರಿದ್ರರು ಕೂಡಾ ಅವಳನ್ನು ಮದುವೆ ಮಾಡಿಕೊಳ್ಳುವ ಸಾಹಸಕ್ಕೆ ಬಾರದಾದರು. ರಾಜ ಕುಮಾರಿ ದಿನದಿಂದ ದಿನಕ್ಕೆ ಸೌಂದರ್ಯ ತುಂಬಿ ಕೊಳ್ಳುತ್ತ ಏಕಾಂತದಲ್ಲಿ ರಹಸ್ಯವಾಗಿಯೇ ಇದ್ದಳು. ನಗರದಲ್ಲಿ ದಿನಾ ಡಂಗುರ ಸಾರುತ್ತಲೇ ಇದ್ದಿತು.

ಒಂದುದಿನ ನಗರಕ್ಕೆ ಒಬ್ಬ ಕುರುಡನು ಭಿಕ್ಷೆ ಎತ್ತಿ ಕೊಳ್ಳಲಿಕ್ಕಾಗಿ ಬಂದನು. ಅವನನ್ನು ನಡೆಸಲು, ಅವನೊಂದಿಗೆ ಒಬ್ಬ ಗೂನನೂ ಬಂದಿದ್ದನು.

ಬೀದಿಯಲ್ಲಿ ಸಾರುವ ಡಂಗುರದ ಸಮಾಚಾರ ವನ್ನು ಕಿವಿಗೊಟ್ಟು ಕೇಳಿದ ಕುರುಡನು, ಗೂನ ನೊಂದಿಗೆ, "ನನ್ನನ್ನು ಆ ಡಂಗುರ ಸಾರುವವನ ಬಳಿಗೆ ಕರೆದುಕೊಂಡು ಹೋಗು. ನಾನು ಅವ ನೊಂದಿಗೆ ನನ್ನ ಸಮ್ಮತಿಯನ್ನು ತಿಳಿಸುತ್ತೇನೆ. ನನ್ನ ಹೆಂಡತಿ ಕೆಟ್ಟವಳಾಗಿಬಿಟ್ಟರೆ ನನಗೆ ಆಗಬೇಕಾದ್ದೇನಿದೆ? ಲಕ್ಷ ಚಿನ್ನದ ಮೊಹರಿ ಸಂಪಾದನೆಯಾಗುವುದಲ್ಲಾ? ಬದುಕಿದಷ್ಟು ದಿನ ಹಾಯಾಗಿ ಬದುಕಿ ಸತ್ತರಾಯಿತು. ನನ್ನಂಥ ಹುಟ್ಟುಗುರುಡನಿಗೆ ಮರಣ ಕೂಡ ಒಂದು ವಿಮೋಚನೆಯೇ. ಅಷ್ಟರವರೆಗೆ ಬೇಕಾದ್ದು ತಿಂದುಂಡು ಸುಖಪಡಬಹುದು" ಎಂದನು.

ಮಂದರಕನೆಂಬ ಹೆಸರುಳ್ಳ ಆ ಗೂನನು ಕುರುಡ ನನ್ನು ಡಂಗುರ ಸಾರುವವನ ಬಳಿಗೆ ಕರೆದುಕೊಂಡು ಹೋದನು. ಕುರುಡನು ಡಂಗುರ ಸಾರುವ ಅಧಿಕಾರಿ ಯೊಂದಿಗೆ, "ಮಹಾರಾಜರು ನನಗೆ ತಮ್ಮ ಮಗಳನ್ನು ಕೊಡಲು ಸಮ್ಮತಿಸುವರಾದರೆ ನಾನು ಅವಳನ್ನು ಮದುವೆಯಾಗುತ್ತೇನೆ. ತಿಳಿಸುವಿರಾ?" ಎಂದನು.

ಅಧಿಕಾರಿ ಕುರುಡನನ್ನು ರಾಜನ ಬಳಿಗೆ ಕರೆದು ಕೊಂಡು ಹೋಗಿ, ಅವನು ರಾಜಕುಮಾರಿಯನ್ನು ಮದುವೆಯಾಗಲು ಇಷ್ಟಪಡುವ ಸಮಾಚಾರವನ್ನು ತಿಳಿಸಿದನು. ರಾಜನು ಸಂತೋಷದಿಂದ, "ಕುರುಡ ನಾದರೇನು? ನನ್ನ ನಿಬಂಧನೆಗಳಿಗೆ ಒಪ್ಪುವವನು ಯಾವನಾದರೂ ಚಿಂತೆಯಿಲ್ಲ. ಕುರುಡನಾದರೂ ಕುಂಟನಾದರೂ ಅವನು ನನ್ನ ಮಗಳನ್ನು ಮದುವೆ ಯಾಗುವೆನೆಂದು ಬಂದುದೇ ದೊಡ್ಡದು. ಮದುವೆ ಯಾದ ಕೂಡಲೇ ಈ ದೇಶ ಬಿಟ್ಟು ಹೋಗುವವನಿಗೆ ಹುಡುಗಿಯೊಂದಿಗೆ ಲಕ್ಷ ಚಿನ್ನದ ಮೊಹರಿಗಳನ್ನೂ ಕೊಟ್ಟುಬಿಡುತ್ತೇನೆ" ಎಂದನು ರಾಜ.

ರಾಜಾಜ್ಞೆಯಂತೆ ಆ ಕುರುಡನನ್ನು ಭಟರು ಕರೆದು ಕೊಂಡು ಹೋಗಿ ನದಿಯಲ್ಲಿ ಸ್ನಾನಮಾಡಿಸಿ ಉತ್ತಮ ವಸ್ತ್ರಗಳನ್ನು ಉಡಿಸಿ ಶಾಸ್ತ್ರೋಕ್ತವಾಗಿ ರಾಜ ಕುಮಾರಿಯೊಂದಿಗೆ ಮದುವೆಮಾಡಿಸಿದರು. ವಿವಾಹ ಮುಗಿದ ಕೂಡಲೇ ಕುರುಡನ ಕೈಗೆ ಲಕ್ಷ ಚಿನ್ನದ ನಾಣ್ಯಗಳ ಮೂಟೆಯನ್ನು ಕೊಟ್ಟು ಅವನನ್ನೂ, ಅವನ ವಧುವನ್ನೂ ದೋಣಿಯಲ್ಲಿ ಕೂಡಿಸಿ ಯಮುನಾ ನದಿಯಲ್ಲಿ ಹೊರಡಿಸಿದರು. ಅವರೊಂದಿಗೆ ಗೂನನೂ ದೋಣಿಯಲ್ಲಿ ಏರಿಕೊಂಡನು. ದೋಣಿ ಯವನು ಅವರನ್ನು ದೇಶದಿಂದ ಹೊರಗೆ ದಾಟಿಸಿ ಹಿಂದಿರುಗಿ ಹೊರಟು ಹೋದನು.

ಕುರುಡನು ಗೂನ ಮತ್ತು ತನ್ನ ಹೆಂಡತಿಯೊಂದಿಗೆ ಒಂದು ದೊಡ್ಡ ನಗರವನ್ನು ಸೇರಿ, ದೊಡ್ಡದೊಂದು ಭವನವನ್ನು ಕೊಂಡುಕೊಂಡನು. ಅದರಲ್ಲಿ ಮೂವರೂ ವೈಭವದಿಂದ ಜೀವಿಸ ತೊಡಗಿದರು. ಕುರುಡನಿಗೆ ತಿನ್ನುವುದು, ಉಣ್ಣುವುದು, ಕೂಡುವುದು, ಮಲಗುವುದು ಅಷ್ಟೇ ಕೆಲಸ. ಗೂನನೇ ಮನೆಯ ಕೆಲಸಗಳನ್ನೆಲ್ಲಾ ನೋಡಿಕೊಳ್ಳುವನು. ಆ ಸಂದರ್ಭದಲ್ಲಿ ಮುಂದೆ ಬೇಗದಲ್ಲಿಯೇ ಗೂನನಿಗೂ ರಾಜಕುಮಾರಿಗೂ ಪ್ರೇಮ ಸಂಬಂಧ ಬೆಸೆದು, ಕುರುಡನಿಗೆ ತಿಳಿಯದಂತೆ ಅವರಿಬ್ಬರೂ ಅನ್ಯೋನ್ಯರಾದರು.

ಒಂದುಸಾರಿ ರಾಜಕುಮಾರಿ ತನ್ನ ಪ್ರಿಯನೊಂದಿಗೆ, "ಹೆಸರಿಗೆ ಮಾತ್ರ ನಾನು ಅವನ ಹೆಂಡತಿಯಾಗಿರುವುದು ಏನೂ ಚೆನ್ನಾಗಿಲ್ಲ. ಆ ಕುರುಡು ಕಸದವನನ್ನು ಕೊಂದುಬಿಟ್ಟರೆ ನಿಶ್ಚಿಂತರಾಗಿರಬಹುದು. ಆದುದರಿಂದ ನೀನು ಘಾಟಾದ ವಿಷವನ್ನು ತಂದುಕೊಟ್ಟರೆ ಸಾಕು. ನಾನು ಆಹಾರದಲ್ಲಿ ಅದನ್ನು ಕಲೆಸಿಬಿಡುತ್ತೇನೆ. ಪೀಡೆಯನ್ನು ತೊಲಗಿಸಿಬಿಡೋಣ" ಎಂದಳು.

ಗೂನನಿಗೂ ಅದೇ ಒಳಿತೆಂದು ತೋರಿ, ಒಳ್ಳೆಯ ವಿಷವನ್ನು ಹುಡುಕುತ್ತಾ ಹೋದನು. ಒಂದು ಕಡೆಯಲ್ಲಿ ಸತ್ತುಬಿದ್ದಿದ್ದ ಮಹಾನಾಗವೊಂದು ಅವನಿಗೆ ಸಿಕ್ಕಿತು. ಅವನು ಅದನ್ನು ಮನೆಗೆ ತೆಗೆದುಕೊಂಡು ಬಂದು, ರಾಜಕುಮಾರಿಗೆ ಕೊಟ್ಟು, "ಇದನ್ನು ತುಂಡು ತುಂಡು ಮಾಡಿ ಹಚ್ಚಿ ಅಡಿಗೆಮಾಡಿ ಕುರುಡನಿಗೆ ತಿನಿಸಿಬಿಡು. ಚೆನ್ನಾಗಿ ಮಸಾಲೆ ಹಾಕಿ ಮಾಡು. ಅವನಿಗೆ ಮೀನಿನ ಮೇಲೋಗರವೆಂದರೆ ಬಹಳ ಇಷ್ಟ. ಆದ್ದರಿಂದ ಅದನ್ನು ಗಂಟಲವರೆಗೂ ಜಡಿದುಕೊಳ್ಳುತ್ತಾನೆ. ಆ ಮೇಲೆ ಕಿಂಕುಂ ಎನ್ನದೆ ಸತ್ತು ಬೀಳುತ್ತಾನೆ." ಎಂದು ಹೇಳಿ ತನ್ನ ಕೆಲಸ ನೋಡಿಕೊಳ್ಳಲು ಹೋದನು.

ರಾಜನ ಮಗಳು ಗೂನನು ಹೇಳಿದ ಹಾಗೆಯೇ ಮಾಡುತ್ತ ನಾಗವನ್ನು ಬೇಯಲಿಕ್ಕಿಟ್ಟು, ಕುರುಡನನ್ನು ಒಲೆಯ ಮುಂದೆ ಕೂಡಿಸಿ, ಸೌಟನ್ನು ಅವನ ಕೈಗೆ ಕೊಟ್ಟು, "ಪ್ರಿಯಾ, ನಿಮಗೆ ಇಷ್ಟವೆಂದು ಮೀನಿನ ಮೇಲೋಗರ ಒಲೆಯಲ್ಲಿಟ್ಟಿದ್ದೇನೆ. ನಾನು



ಹೋಗಿ ನೀರು ತೆಗೆದುಕೊಂಡು ಬರುತ್ತೇನೆ. ಅಷ್ಟರ ವರೆಗೆ ಈ ಸೌಟನಿಂದ ಪಾತ್ರದೊಳಗೆ ಮಗುಚಿ ಕೊಂಡಿರಿ" ಎಂದು ಹೇಳಿ ಹೊರಟು ಹೋದಳು.

ಕುರುಡನು ಸಂತೋಷಪಡುತ್ತ, ತುಟಿಗಳನ್ನು ನೆಕ್ಕಿಕೊಳ್ಳುತ್ತ, ಸೌಟಿನಿಂದ ಒಲೆಯ ಮೇಲಿನ ಪಾತ್ರ ವನ್ನು ಮಗುಚುತ್ತಾ ಇದ್ದನು. ವಿಷದ ನಾಗದಿಂದ ಹೊರಡುವ ಆವಿಯಿಂದ, ಅವನ ಕುರುಡುತನಕ್ಕೆ ಕಾರಣವಾದ ಕಣ್ಣಿನಲ್ಲಿ ಕಟ್ಟಿಕೊಂಡ ಪರೆಗಳು ಕರಗಿ ಹೋಗಿ, ಅವನಿಗೆ ದೃಷ್ಟಿ ಬಂದುಬಿಟ್ಟಿತು.

ಅವನು ಆಶ್ಚರ್ಯದಿಂದ ನೋಡುತ್ತಿರಲು, ಒಲೆಯಲ್ಲಿ ಬೇಯುತ್ತಿರುವುದು ಮೀನು ಅಲ್ಲವೆಂದೂ, ಕಾಲಸರ್ಪದ ತುಂಡುಗಳೆಂದೂ ಗೊತ್ತಾಯಿತು. "ಇದೇನಿದು ? ಅವಳು ಕಾಲನಾಗವನ್ನು ಹಚ್ಚಿ ಬೇಯಿಸುತ್ತ ಮೀನುಗಳೆಂದು ಏಕೆ ಹೇಳಿದಳು ? ಓಹೋ! ಗೊತ್ತಾಯಿತು! ಈ ಮೂರು ಮೊಲೆಗಳ ಹೆಣ್ಣಿಗೆ ನೀತಿಯೆಂಬುದು ಇಲ್ಲ. ಅವಳು ಗೂನನನ್ನೋ, ಮತ್ತಾವನನ್ನೋ ಪಳಗಿಸಿಟ್ಟುಕೊಂಡಿದ್ದಾಳೆ. ನನ್ನನ್ನು ಕೊಲ್ಲಲು ಈ ಉಪಾಯಮಾಡಿದ್ದಾಳೆ. ನಿಜವನ್ನು ತಿಳಿದು ಅವಳ ತಪ್ಪು ಹೊರಗೆ ಹಾಕದೆ ಬಿಡಲಾರೆ" ಎಂದುಕೊಂಡು ಕುರುಡನ ಹಾಗೆಯೇ ನಟಿಸಿದನು.

ಸ್ವಲ್ಪ ಹೊತ್ತಿಗೆ ಗೂನನೂ ರಾಜಕುಮಾರಿಯೂ ಮನೆಗೆ ಬಂದರು. ಕುರುಡನು ನೋಡುವುದಿಲ್ಲವೆಂದು ಕೊಂಡು ಇಬ್ಬರೂ ಸ್ವೇಚ್ಛೆಯಿಂದ ಸರಸಾಲಾಪ ಮಾಡಿಕೊಂಡರು. ಇದನ್ನು ನೋಡುತ್ತಿದ್ದ ಕುರುಡನು, ಸಮೀಪದಲ್ಲಿ ಯಾವ ಆಯುಧವೂ ಇಲ್ಲದ ಕಾರಣ ದಿಂದ, ಕುರುಡನ ಹಾಗೆ ನಟಿಸುತ್ತ ತಡವುತ್ತ ಆಯುಧ ವನ್ನು ಅರಸ ತೊಡಗಿದನು. ಅದಾವುದನ್ನೂ ಆ ಪ್ರೇಮಿಗಳು ಲಕ್ಷಿಸಲಿಲ್ಲ. ಯಾವುದೂ ಸಿಕ್ಕದೆ ಕುರುಡನು ಸಹನೆ ಮೀರಿ ಇದ್ದಕ್ಕಿದ್ದ ಹಾಗೆ ಗೂನನನ್ನು ಎತ್ತಿ ಹಿಡಿದು ತಿರುಗಿಸಿ, ರಾಜಕುಮಾರಿಯ ಎದೆಯ ಮೇಲೆ ಬಲವಾಗಿ ಕುಕ್ಕಿ ಒತ್ತಿದನು. ಆ ಒಂದು ಪೆಟ್ಟಿಗೆ ಇಬ್ಬರನ್ನೂ ಒಂದೇ ಬಾರಿಗೆ ಕೊಲ್ಲಬೇಕೆಂದು ಕೊಂಡನು. ಆದರೆ ನಡೆದುದು ಬೇರೆಯೇ!

ಅದೇನಂದರೆ, ಅವರಿಬ್ಬರಿಗೂ ಅಂಥ ದೊಡ್ಡ ನೋವೇನೂ ಆಗಲಿಲ್ಲ ಮಾತ್ರವಲ್ಲ, ರಾಜಕುಮಾರಿಯ ಮೂರನೇ ಮೊಲೆ ಒಳಕ್ಕೆ ಸೇರಿ ಮಾಯವಾಗಿತ್ತು! ಗೂನನ ಬೆನ್ನಿನಲ್ಲಿದ್ದ ಡುಬ್ಬ ಸರಿಯಾಗಿ ಗೂನು ಹೋಗಿ, ಬೆನ್ನು ನೆಟ್ಟಗಾಗಿತ್ತು!

ಈ ವಿಧವಾಗಿ ವಿಧಿ ಅನುಕೂಲಿಸಿದುದರಿಂದ ರಾಜ ಕುಮಾರಿಗೂ, ಕುರುಡನಿಗೂ, ಗೂನನಿಗೂ ಮರಣ ಕಾರಣವಾದ ಪ್ರಯತ್ನಗಳೇ ಅವರ ಲೋಪಗಳನ್ನು ಹೋಗಲಾಡಿಸುವಂತಾಗಿ, ಅವರು ಮೂವರೂ ಸ್ನೇಹ ದಿಂದ ಒಂದಾಗಿರುವಂತಾಯಿತು! ಇದೇ ಎಣೆಯಿಲ್ಲದ ವಿಧಿಯ ವೈಚಿತ್ರ್ಯವೆಂದರೆ!





# ಕರಡಿಕೆಂಗಣ್ಣ

## ೨೧

[ಕಾಳೀವರ್ಮನು ಸುರಂಗ ಮಾರ್ಗದಲ್ಲಿ ಹೋಗಿ, ಬೈರಾಗಿಗಳಿಂದ ಮಂತ್ರದಂಡವನ್ನು ಸ್ವಾಧೀನಪಡಿಸಿಕೊಂಡನು. ಅನಂತರ ಅವರೆಲ್ಲ ಜಿತಕೇತುರಾಜನ ಉದ್ಯಾನದಲ್ಲಿ ಮೇಲೆದ್ದರು. ಅಲ್ಲಿಗೆ ಮಾಯಾಮರ್ಕಟನೊಂದಿಗೆ ಜಿತಕೇತು ರಾಜನೂ ಬಂದನು. ಅಡಗಲು ನೋಡುವ ಬೈರಾಗಿಗಳನ್ನು ನೋಡಿ ರಾಜನು ಯಾರು ಏನೆಂದು ಕೇಳಿದನು. ಗುರುಬೈರಾಗಿ ಹೆದರಿ "ಮಂತ್ರದಂಡ, ಬೋಳಪ್ಪ"...ಮುಂತಾಗಿ ಏನೇನೋ ಹೇಳಿದನು.]

ಗುರುಬೈರಾಗಿ ಏನು ಹೇಳಲಿಕ್ಕಿದ್ದನೆಂದು ಜಿತಕೇತು ರಾಜನಿಗೆ ಗೊತ್ತಾಗಲಿಲ್ಲ. ತಮಗೆ ಸಂಬಂಧಿಸಿದ ಮಾತುಗಳೂ ಅವನ ಬಾಯಿಯಲ್ಲಿ ಬರುವುದನ್ನು ನೋಡಿ ರಾಜನಿಗೆ ಕುತೂಹಲವೂ, ಕೋಪವೂ ಒತ್ತೊತ್ತಿ ಬರಲು, "ಎಲೋ, ಬೈರಾಗಿ ಭಡವಾ! ನೀನು ಬೊಗಳುವುದೇನನ್ನು? ಮಂತ್ರದಂಡವೆಲ್ಲಿದೆ? ಬೋಳಪ್ಪ ಯಾರವನು?" ಎಂದು ಕೇಳಿದನು.

ಗುರುಬೈರಾಗಿ ಸ್ವಲ್ಪ ಧೈರ್ಯ ತಂದುಕೊಂಡು, "ಮಹಾರಾಜರೆ! ಬೈರಾಗಿಯಾದ ನನ್ನನ್ನು ಭಡವ ಭಂಡರ ಲೆಕ್ಕದಲ್ಲಿ ಜಮೆಕಟ್ಟಬಾರದು. ಭಡವ ಭಂಡರು ಬೇರೆ, ಬೈರಾಗಿ ಸನ್ಯಾಸಿಗಳು ಬೇರೆ. ಈ ವಿಷಯ ತಮಗೆ ಗೊತ್ತೇ ಇರುತ್ತೆ. ಕೋಪವಶದಿಂದ ಅದು ತಮ್ಮಲ್ಲಿ ಮುಚ್ಚಿಹೋಯಿತು, ಅಷ್ಟೇ. ಯಾವುದಕ್ಕೂ ಸಮಾಧಾನ ಬೇಕು ಪ್ರಭೂ! ಒಂದು ಸಣ್ಣ ವಿಷಯವಾದರೂ ಅರ್ಥವಾಗಬೇಕಾದರೆ ಶಾಂತ ಮನಸು ಬೇಕು ದೊರೆಗಳೇ!" ಎಂದನು.

ರಾಜನು ಅವನ ಬೋಧನದ ರೀತಿಯ ಮಾತಿಗೆ ಇನ್ನಷ್ಟು ರೇಗಿ ಕಟಕಟ ಹಲ್ಲು ಕಡಿಯುತ್ತ, "ಇವನಿಗೇನು ಬುದ್ಧಿಗಿದ್ದಿ ಕೆಟ್ಟಿರಬಹುದೆ?" ಎಂದು ಮಾಯಾಮರ್ಕಟನನ್ನು ನೋಡಿದನು.



"ಹೌದು ಗುರೋ! ಹೌದು! ಇವರೇ ಮರ್ಕಟಾಮಾತ್ಯ ಮಹಾಶಯರು!" ಎಂದರು ಶಿಷ್ಯ ಬೈರಾಗಿಗಳು. ಮಾಯಾಮರ್ಕಟನು ಬೈರಾಗಿಯನ್ನು ಹೊಡೆಯಲು ಕತ್ತಿ ಎತ್ತಿ, ಕೆಳಗಿಳಿಸಿ, ಬಾಲದಿಂದ ಗುರುಬೈರಾಗಿಯ ಸೊಂಟಕ್ಕೊಂದು ಏಟು ಹಾಕಿ, "ಎಲೋ! ಶುಂಠಾ! ಏನೇನೋ ಹೇಳುತ್ತ ಹೊತ್ತು ಕಳೆಯುವೆಯಾದರೆ ನಿನ್ನ ತಲೆಯನ್ನೇ ಹಾರಿಸಿಬಿಡುತ್ತೇನೆ! ನಿನ್ನ ಗೂಢಚಾರ ಪ್ರವರ್ತನೆಗಳೊಂದೂ ನನ್ನ ಮುಂದೆ ನಡೆಯದು!" ಎಂದನು.

ಮರ್ಕಟಾಮಾತ್ಯನ ಬಾಲದ ಪೆಟ್ಟಿಗೆ ಹೊರಳಿಬಿದ್ದ ಬೈರಾಗಿ ಆ ಕೂಡಲೇ ಎದ್ದು ಮೈ ಕೈ ಕೊಡರಿ ನೀವಿಕೊಳ್ಳುತ್ತ ಶಿಷ್ಯರ ಕಡೆಗೆ ನೋಡಿದನು. ದೊಡ್ಡ ಶಿಷ್ಯನು ಚಿಂತೆಯ ಮೋರೆಮಾಡಿಕೊಂಡು, "ಗುರುಗಳೇ! ನಿಜ ಸಂಗತಿ ಹೇಳಿಬಿಡಿ. ನಮಗೆ ಬಹುಮಾನವೂ ಸಿಕ್ಕೀತು. ನಗರದ ಉತ್ತರ ದ್ವಾರದ ಹತ್ತಿರವಿರುವ ಧರ್ಮಸತ್ರದ ಎದುರಿನಲ್ಲಿರುವ ಮೂರು ಮಾಳಿಗೆಯ ಮನೆಯ ಯಜಮಾನನ ಹೆಸರು ತಾನೇ ಬೋಳಪ್ಪಾ? ಅವನ ಹತ್ತಿರವಲ್ಲವೇ ನಾವು ಆ ಮಂತ್ರದಂಡ ನೋಡಿದೆವು? ಯಾಕೆ ಸಂದೇಹ ಪಡುವಿರಿ? ಹೇಳಿಬಿಡಿ!" ಎಂದನು.

ಗುರುಬೈರಾಗಿ ಗಂಟಲು ಕೆನೆದು ಹೇಳಲು ಪ್ರಯತ್ನಿಸುವಾಗ, ಮಾಯಾಮರ್ಕಟನು ಕಿಚಕಿಚನೆ ನಕ್ಕು, "ಎಲೋ! ಮಂಕುಬುದ್ಧೀ! ಇನ್ನು ನಿನ್ನ ಗುರು ಹೇಳಲಿಕ್ಕೇನಿದೆ? ಎಲ್ಲಾ ಸಂಗತಿ ನೀನೇ ಹೇಳಿಬಿಟ್ಟೆಯಲ್ಲಾ?" ಎಂದು ರಾಜನನ್ನು ನೋಡಿ, "ಮಹಾರಾಜಾ! ಕೂಡಲೇ ಕೆಲಮಂದಿ ಭಟರನ್ನು ಆ ಬೋಳಪ್ಪನ ಮನೆಗೆ ಕಳುಹಿಸಿ, ಆ ಮಂತ್ರದಂಡವನ್ನು ತರಿಸಿರಿ! ಎಲ್ಲಿ ಅಡಗಿದರೂ ಬಿಡಬೇಡಿರೆಂದು ಕಟ್ಟಪ್ಪಣೆ ಮಾಡಿ ಕಳುಹಿಸಿರಿ! ಮಂತ್ರದಂಡವಿಲ್ಲದೆ ಬರಿಗೈಯಲ್ಲಿ ಬಂದವನ ತಲೆ ಕಡಿಯುವೆನೆಂಮ ಹೇಳಿರಿ!" ಎಂದನು.

ಮಾಯಾಮರ್ಕಟನು ಅತ್ಯಂತ ಕೋಪದಿಂದ ಕಣ್ಣು ತಿರುಗಿಸುತ್ತ ಬೈರಾಗಿಯನ್ನು ನೋಡಿ, "ಏನೆಲೋ! ಕಳ್ಳಬೈರಾಗೀ! ಮಾತಿನ ಮಲ್ಲತನವನ್ನು ನಿಲ್ಲಿಸಿ ಏನು ಸಂಗತಿ ಎಂದು ಸ್ಪಷ್ಟವಾಗಿ ಹೇಳು. ಸುಮ್ಮನೆ ನಿಮ್ಮನ್ನು ಕೊಂದು ಪಾಪ ಕಟ್ಟಿಕೊಳ್ಳುವವರು ನಾನಲ್ಲ. ನೀನು ಹೆದರಿ ನಡುಗಿ ಬುದ್ಧಿಕೆಡಿಸಿಕೊಳ್ಳಬೇಕಾಗಿಲ್ಲ. ಧೈರ್ಯದಿಂದ ಹೇಳು. ಮಂತ್ರದಂಡವೆಂದೆಯಲ್ಲಾ? ನನ್ನ ಮಂತ್ರದಂಡವನ್ನು ಯಾರು ಕದ್ದರೆಂಬುದು ನಿನಗೆ ಗೊತ್ತಿದೆ. ನಿಜತಾನೇ?" ಎಂದು ಕೇಳಿದನು.

ಗುರುಬೈರಾಗಿ ಮರ್ಕಟ ರೂಪದವನನ್ನು ಆಶ್ಚರ್ಯದಿಂದ ನೋಡಿ, ತನ್ನ ಶಿಷ್ಯರ ಕಡೆಗೆ ತಿರುಗಿ, "ಎಲೋ, ಪ್ರಿಯ ಶಿಷ್ಯೋಪ ಶಿಷ್ಯರೆ! ನೀವು ಯಾರೋ ಹೊಸ ಅಮಾತ್ಯರೆಂದು ಹೇಳಿದಿರಲ್ಲಾ? ಚಂದ್ರಶಿಲಾ ನಗರದ ಹೊಸ ಅಮಾತ್ಯರೆಂದರೆ ಇವರೇ ಏನು?" ಎಂದು ಕೇಳಿದನು.



ರಾಜನು ಗಟ್ಟಿಯಾಗಿ ಚಪ್ಪಾಳೆ ತಟ್ಟಿದನು. ಅದನ್ನು ಕೇಳಿ ಬಿರಬಿರನೆ ಒಬ್ಬ ಭಟನು ಓಡಿಬಂದನು. ರಾಜನು ಅವನಿಗೆ ಬೈರಾಗಿಗಳನ್ನು ತೋರಿಸಿ, "ಈ ಬೈರಾಗಿಗಳ ಹಿಂದೆ ಇನ್ನೂ ಕೆಲಮಂದಿ ಭಟರೊಂದಿಗೆ ಹೋಗಿ, ನಮ್ಮ ನಗರದಲ್ಲೇ ವಾಸಮಾಡುತ್ತ ಸುಮ್ಮನಿರುವ ಆ ಬೋಳಪ್ಪನನ್ನು, ಅವನು ಕದ್ದ ಮಂತ್ರದಂಡದೊಂದಿಗೆ ಇಲ್ಲಿಗೆ ಎಳೆದುಕೊಂಡು ಬರಬೇಕು. ಬರಿಗೈಯಲ್ಲಿ ಬಂದರೆ ತಲೆ ಕಡಿಸುತ್ತೇನೆ!" ಎಂದು ಆಜ್ಞೆ ಹೊರಡಿಸಿದರು.

ಭಟರು ಬೈರಾಗಿಗಳನ್ನು ನೋಡಿ, "ಹೋಗೋಣ, ನಡೆಯಿರಿ!" ಎಂದರು. ಅಷ್ಟು ಹೊತ್ತಿಗೆ ಕೋಟೆ ಗೋಡೆಯ ಹೊರಗಿನಿಂದ, ಕಿವಿ ತೂತಾಗುವಂತೆ ಹೊರಟ ಶಂಖನಾದವನ್ನು ಕೇಳಿ ಎಲ್ಲರೂ ಸ್ವಲ್ಪ ಹೊತ್ತು ಸ್ತಬ್ಧರಾದರು. ಶಂಖನಾದವನ್ನು ಕೇಳಿ ಮಾಯಾಮರ್ಕಟನು ಆನಂದದಿಂದ ಹಾರುತ್ತ, "ಆಹಾ! ಮಹಾರಾಜಾ! ಇನ್ನು ನಮ್ಮ ಕಷ್ಟಗಳೆಲ್ಲ ಹಾರಿಹೋಯಿತೆಂದೇ ನಂಬಿರಿ. ಆ ಕರಡಿಕೆಂಗಣ್ಣ ಮಾಂತ್ರಿಕ, ದುರ್ಮುಖರಾಜ, ಉಗ್ರದಂಡರಾಕ್ಷಸ, ಕಾಳೀವರ್ಮ ಎಲ್ಲರೂ ಹತರಾದರೆಂದೇ ತಿಳಿಯಿರಿ. ನೀವು ಕ್ಷಣಮಾತ್ರದಲ್ಲಿ ಚಕ್ರವರ್ತಿಯಾಗುವಿರಿ!" ಎಂದು ಹೇಳಿ ಕೋಟೆಯ ಗೋಡೆಯ ಕಡೆಗೆ ಬಿರಬಿರನೆ ಹೊರಟನು.

ರಾಜನು ಥಕ್ಕನೆ ಹಾರಿ ಅವನ ಭುಜ ಹಿಡಿದು ನಿಲ್ಲಿಸಿ, "ತಡೆಯಯ್ಯಾ! ನನ್ನ ಸೈನಿಕರೂ, ಸಾಮಂತ ಸೂರ್ಯಭೂಪತಿಯೂ, ಆ ರಾಕ್ಷಸನಿಂದಲೂ, ಕರಡಿಕೆಂಗಣ್ಣ ಮಾಂತ್ರಿಕನಿಂದಲೂ ಎಷ್ಟು ಹೊತ್ತು ಕೋಟೆಯನ್ನು ಕಾಪಾಡಿಕೊಂಡಿರಬಲ್ಲರು? ನೀನೂ ನನ್ನೊಂದಿಗಿಲ್ಲದಿದ್ದರೆ ನನಗೆ ಆಲೋಚನೆ ಹೇಳಿ ಸಹಾಯಮಾಡುವವರು ಬೇರೆ ಯಾರಿದ್ದಾರೆ? ನೀನೂ ನನ್ನ ಕೈ ಬಿಟ್ಟುಹೋಗುವೆಯಲ್ಲಾ! ಮಂತ್ರಿ ಜೀವಗುಪ್ತನನ್ನು ಅವಮಾನಪಡಿಸಿ ಓಡಿಸಿದ್ದು ತಪ್ಪಾಯಿತೋ ಏನೋ?" ಎಂದನು. "ರಾಜಾ! ನಿಮಗೆ ಯಾವ ಭಯವೂ ಇಲ್ಲವೆಂದು ಹೇಳಿದೆನಲ್ಲಾ! ಸುಮ್ಮನೆ ಸಂದೇಹದಿಂದ ಚಿಂತೆಪಡುವಿರೇಕೆ? ಹಾಗೆಲ್ಲಾ ನಾನೆಲ್ಲಿಗೂ ಓಡಿ ಹೋಗೋದಿಲ್ಲ. ಸುಮ್ಮನಿರಿ!" ಎಂದು ಮಾಯಾಮರ್ಕಟನು ಕೋಟೆಯ ಗೋಡೆಯ ಮೇಲೆ ಏರಿ ಓಡಿದನು.

ಅದುವರೆಗೂ ಹೂವಿನ ಗಿಡಗಳ ಹಿಂದೆ ಅಡಗಿದ್ದು ಎಲ್ಲವನ್ನೂ ಗಮನಿಸಿಕೊಂಡಿದ್ದ ಕಾಳೀವರ್ಮನು ಇದೇ ಸರಿಯಾದ ಸಮಯವೆಂದುಕೊಂಡು, ಹೊರಬೀಳಲು ನೋಡುವಷ್ಟರಲ್ಲೇ, ಅಲ್ಲಿಗೆ ಸಾಮಂತ ಸೂರ್ಯಭೂಪತಿ, ಓಡೋಡಿ ಬರುವುದು ಕಾಣಿಸಿದುದರಿಂದ ಅಲ್ಲೇ ಅಡಗಿದನು. ಸೂರ್ಯಭೂಪತಿ ಬಂದವನೇ, ರಾಜನ ಮುಂದೆ ನಿಂತು, ಆಯಾಸದಿಂದ ಶ್ವಾಸ ಬಿಡುತ್ತ, "ಮಹಾರಾಜರೇ, ನಾನು ಈಗಲೇ ಹೊರಟು ನನ್ನ ಸ್ವಂತ ಕೋಟೆಗೆ ಹೋಗಬೇಕು. ಒಬ್ಬ ರಾಕ್ಷಸನೂ, ಶಂಖ ಧ್ವನಿಯೆಬ್ಬಿಸುವ ಒಬ್ಬ



ಮಾಂತ್ರಿಕನೂ ನನ್ನ ಕೋಟೆಯ ಬಾಗಿಲನ್ನು ಒಡೆದು ಒಳಗೆ ನುಗ್ಗಲು ನೋಡುವರಂತೆ. ಒಳಗೆ ನನ್ನ ಹೆಂಡತಿಯೂ ಮಗಳೂ, ಕೆಲವೇಮಂದಿ ಸೇವಕರೂ ಹೊರತು ಬೇರೆ ಯಾರೂ ಇಲ್ಲ!" ಎಂದನು.

ಜಿತಕೇತು ರಾಜನು ಆಶ್ಚರ್ಯಪಡುತ್ತ, "ಇದೇನು ಸಮಾಚಾರವೋ? ಎಲ್ಲಾ ಒಟ್ಟಿಗೆ ಒಂದೇಸಾರಿ ಹೇಗಾದೀತು ? ಒಬ್ಬ ರಾಕ್ಷಸನೂ ಮಾಂತ್ರಿಕನೂ ನನ್ನ ಕೋಟೆಯ ಮೇಲೆ ದಾಳಿ ಬರುತ್ತಿದ್ದಾರೆ. ಮತ್ತೊಬ್ಬ ರಾಕ್ಷಸನೂ ಮಾಂತ್ರಿಕನೂ ಅಂದರೆ ಏನು ಅರ್ಥ? ಇವರೇ ಅಲ್ಲಿಯೂ ಇಲ್ಲಿಯೂ ಒಂದೇ ಬಾರಿ ಇರುವರೇನು ? ಅಷ್ಟು ಸಮರ್ಥರೇನು! ಅಯ್ಯಯ್ಯೊ!" ಎಂದನು.

ಆ ಪ್ರಶ್ನೆಗೆ ಏನು ಉತ್ತರ ಕೊಡುವುದೆಂದು ಸಾಮಂತಸೂರ್ಯಭೂಪತಿ ಮೇಲೆ ಕೆಳಗೆ ನೋಡುತ್ತಿರಲು, ಮರೆಯಲ್ಲಿದ್ದ ಕಾಳೀವರ್ಮನು ಹೊರಗೆ ಬರುತ್ತ, "ಮಹಾರಾಜಾ, ಈ ಕ್ಷಣದಿಂದ ನನ್ನನ್ನು ಶತ್ರುವೆಂದು ತಿಳಿಯಬೇಡಿ. ಈ ಮಿತ್ರನ ಮೇಲೆ ಕತ್ತಿ ಎತ್ತಬೇಡಿರಿ. ನೀವೀಗ ಎಷ್ಟೊಂದು ಅಸಹಾಯಕರಾಗಿರುವಿರೆಂದು ನಿಮಗಿಂತ ಹೆಚ್ಚಾಗಿ ನನಗೆ ಗೊತ್ತಿದೆ. ನಿಮ್ಮ ಮಾಯಾಮರ್ಕಟನು ಕೋಟೆಗೋಡೆ ಹಾರಿ ಹೊರಗೆ ಹೋದುದನ್ನು ನೀವು ತಿಳಿದಿಲ್ಲ! ಅವನು ಇಷ್ಟು ಹೊತ್ತಿಗೆ ಬಹು ದೂರ ಹೋಗಿರುತ್ತಾನೆ! ನನ್ನ ಮಾತು ಕೇಳಿರಿ!" ಎಂದನು.

ಜಿತಕೇತು ರಾಜನು ಬೆರಗುಗಣ್ಣುಗಳಿಂದ ಅವನನ್ನು ನೋಡುತ್ತ, "ನೀನು ಅಪರಾಧಿ ಕಾಳೀವರ್ಮನಲ್ಲವೇ? ಮೊದಲು ಶಿರಚ್ಛೇದ ಶಿಕ್ಷೆ ನಿನಗೆ ತಾನೇ ಕೊಟ್ಟಿದ್ದೆ?" ಎಂದನು.

ಕಾಳೀವರ್ಮನು ಕಿರುನಗು ಸೂಸುತ್ತ, "ಅದು ತುಂಬಾ ಹಳೆಯ ಮಾತು! ಆಗ ನೀವು ರಾಜರೆಂಬ ಅಹಂಕಾರದಲ್ಲಿದ್ದಿರಿ. ಈಗ ತೇಲಲಾರದ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದು ತುಂಬಾ ಪೇಚಾಟದಲ್ಲಿರುವಿರಿ. ಅದು ಈಗೀಗ ತಾನೇ ನಿಮಗೆ ಸ್ವಲ್ಪ ಸ್ವಲ್ಪ ಗೊತ್ತಾಗತೊಡಗಿದೆ. ಅದೆಲ್ಲ ನನಗೆ ಗೊತ್ತು" ಎಂದನು.

ಜಿತಕೇತು ರಾಜನು ಸಾಮಂತ ಸೂರ್ಯಭೂಪತಿಯನ್ನು ಅನುಮಾನದಿಂದ ನೋಡುತ್ತ, "ಕಾಳೀವರ್ಮ! ಈ ಸೂರ್ಯಭೂಪತಿ! ಮತ್ತಾರೋ ಮಾಂತ್ರಿಕ ರಾಕ್ಷಸರು! ಏನಿದೆಲ್ಲಾ? ಇದೆಂಥ ಗಜಿಬಿಜಿಯೋ ತಿಳಿಯದಿರುವಾಗ, ನೀನೇನೋ ಹೇಳಲಾರಂಬಿಸಿದ್ದೀ ? ಇಬ್ಬರು ಮಾಂತ್ರಿಕರಾರೋ ? ಇಬ್ಬರು ರಾಕ್ಷಸರಾರೋ? ನೀನು ಗೊತ್ತಿರುವುದೆಂದು ಹೇಳುವುದು ಎಂಥದನ್ನೋ?" ಎಂದನು.

"ಮಹಾರಾಜರೇ, ಈ ಗಲಾಟೆಗಳಿಗೆಲ್ಲಾ ಇಬ್ಬರು ತಾಂತ್ರಿಕ ಮಾಂತ್ರಿಕರ ನಡುವಿನಲ್ಲಿ ಎದ್ದಿರುವ ಜಗಳವೇ ಕಾರಣ. ಅವರು ಬಹ್ಮಪುತ್ರಾ ನದಿಯ ಜನ್ಮಸ್ಥಾನದ ಹತ್ತಿರವಿರುವ ಒಂದು ಪುರಾತನ ಆಲಯದೊಳಗಿನ ಭಲ್ಲೂಕೇಶ್ವರೀ ದೇವಿಯ ಭಕ್ತರು. ಒಬ್ಬನ ಹೆಸರು ಭಲ್ಲೂಕಪಾದನೆಂದು. ಆವನ ಶಿಷ್ಯನಾದ ಕರಡಿ



ಕೆಂಗಣ್ಣನೇ ನಮ್ಮ ಪ್ರಾಂತಕ್ಕೆ ಬಂದವನು. ಎರಡನೆ ಯವನು ಮಿಥ್ಯಾ ಮಿಶ್ರನೆಂಬ ಮಹಾತಾಂತ್ರಿಕ. ಅವನ ಶಿಷ್ಯನೇ ನಿಮ್ಮನ್ನು ಅಂಟಿಕೊಂಡ ಮಾಯಾ ಮರ್ಕಟ. ಇನ್ನು ಆ ಇಬ್ಬರು ರಾಕ್ಷಸರೆಂದರೆ ಅವರು ಅಣ್ಣತಮ್ಮಂದಿರು ಉಗ್ರದಂಡನೆಂಬವನು ನಮ್ಮೊಂದಿ ಗಿದ್ದಾನೆ. ಅವನ ಅಣ್ಣನಾದ ಕಾಲದಂಡನನ್ನು ತಾಂತ್ರಿಕ ಮಿಥ್ಯಾಮಿಶ್ರನು ಸೆರೆ ಹಿಡಿದಿದ್ದಾನೆ. ಇದು ನಿಜ ಸಂಗತಿ! ಈ ಘಟನೆಗಳ ಪರಿಣಾಮವನ್ನು ಹಿಡಿದು ಇಲ್ಲಿಯವರೆಗೂ ನಡೆದಿದೆ." ಎಂದನು ಕಾಳೀವರ್ಮ.

ಕಾಳೀವರ್ಮನ ಮಾತು ನಿಂತ ಕೂಡಲೇ ಸೂರ್ಯ ಭೂಪತಿ, "ಮಹಾರಾಜರೇ! ಆ ತಾಂತ್ರಿಕನೇ ಬಂದೀ ಯಾದ ರಾಕ್ಷಸನನ್ನು ಹಿಂದಿಟ್ಟುಕೊಂಡು ಈ ಕಡೆಗೆ ಬಂದು ಶಂಖಾರಾವಮಾಡಿ, ಈಗ ನನ್ನ ಕೋಟೆಯ ಕಡೆಗೆ ಹೋದ ಹಾಗಿದೆ. ಇಷ್ಟು ಹೊತ್ತಿಗೆ ಆ ತಾಂತ್ರಿಕರಿಂದ ಏನೇನಾಗಿದೆಯೋ? ನನ್ನ ಕುಟುಂಬ ದವರ ಗತಿ ಹೇಗಿದೆಯೋ? ಅಪ್ಪಣೆ, ನಾನು ಹೊರಟೆ. ಮತ್ತೆ ಬಂದು ನಿಮ್ಮ ದರ್ಶನಮಾಡಿಕೊಳ್ಳುತ್ತೇನೆ" ಎಂದು ಹೇಳಿ ಅಲ್ಲಿಂದ ಅತಿವೇಗವಾಗಿ ಹೊರಟು ಹೋದನು.

ಜಿತಕೇತು ರಾಜನು ದಿಕ್ಕೆಟ್ಟವನಂತೆ ದಿಗಿಲಿನಿಂದ ಕಾಳೀವರ್ಮನನ್ನು ನೋಡಿ, "ಕಾಳೀವರ್ಮಾ! ಈಗ ನೀನು ಏನು ಮಾಡಬೇಕೆಂದಿರುವಿ? ಓಹೋ! ನಿನ್ನ ಒಂದು ಕೈಯಲ್ಲಿ ಮಂತ್ರದಂಡವಿದೆಯಲ್ಲಾ! ಎರಡನೇ ಕೈಯಲ್ಲಿ ಕತ್ತಿ! ನೀನು ತಿಳಿದಿರುವ ಹಾಗೆ ನಾನು ರಾಜ್ಯಪಾಲನೆಯಲ್ಲಿ ಅಸಮರ್ಥನಾಗಿರಬಹುದು, ಆದರೆ ಕತ್ತಿ ಯುದ್ಧದಲ್ಲಿ ಅಸಮರ್ಥನೆಂದು ತಿಳಿಯ ಬೇಡ. ಬೆನ್ನು ತೋರಿಸಿ ಓಡುವ ಹೇಡಿಯೂ ನಾನಲ್ಲ. ಯುದ್ಧರಂಗದಲ್ಲಿ ನಾನು ಪ್ರಾಣವನ್ನು ಹುಲ್ಲಿಗೆ ಸಮಾನ ಮಾಡುವವನೆಂದು ತಿಳಿ! ಈಗ ನಿಜ ಹೇಳು. ನನ್ನ ಮೇಲೆ ಯಾವುದನ್ನು ಪ್ರಯೋಗಿಸುವಿ? ಮಂತ್ರದಂಡವನ್ನೋ? ಕತ್ತಿಯನ್ನೋ?" ಎಂದನು.

"ಎರಡನ್ನೂ ಅಲ್ಲ" ಎನ್ನುತ್ತ ಕಾಳೀವರ್ಮನು ಮಂತ್ರದಂಡವನ್ನೂ ಕತ್ತಿಯನ್ನೂ ಕೆಳಗೆ ಹಾಕಿ, "ಮಹಾರಾಜಾ! ನಿಮ್ಮ ಪರಿಪಾಲನೆಯಲ್ಲಿ ನಡೆದ ಅನ್ಯಾಯಗಳನ್ನು ನೀವೂ ನಿಮಗೆ ಆಲೋಚನೆ ಹೇಳುವ ಮಂತ್ರಿಗಳೂ ಸರಿಸಮವಾಗಿ ಹಂಚಿಕೊಳ್ಳ ಬೇಕಾಗಿ ಬರುತ್ತದೆ. ಆದು ಅನಂತರದ ಸಂಗತಿ. ಈಗಿನ ಪರಿಸ್ಥಿತಿಯಲ್ಲಿ ಮುಖ್ಯವಾಗಿ ನಮ್ಮ ರಾಜ್ಯ ವನ್ನು ದೊಡ್ಡ ದೊಡ್ಡ ಮಾಂತ್ರಿಕರಿಂದಲೂ, ರಾಕ್ಷಸ ರಿಂದಲೂ ಉಳಿಸಿಕೊಳ್ಳಬೇಕಾಗಿದೆ. ಅದರ ಬಾಧ್ಯತೆ ನನ್ನ ಮೇಲೆಯೂ ಇದೆ. ಏಕೆಂದರೆ ನಾನು ಈ ರಾಜ್ಯದ ಒಬ್ಬ ಪ್ರಜೆ." ಎಂದನು.

ಕಾಳೀವರ್ಮನ ಮಾತು ಕೇಳಿ ಜಿತಕೇತುರಾಜನು ತುಂಬಾ ಸಂತೋಷಪಟ್ಟು, ಕೆಳಗೆ ಬಿದ್ದ ಕಾಳೀವರ್ಮನ ಕತ್ತಿಯನ್ನೆತ್ತಿ ಅವನ ಕಡೆಗೆ ನೀಡಿದನು. ಅದೇ ಸಮಯಕ್ಕೆ ಸುರಂಗದ ಬಾಯಿಯಿಂದ ರಾಜಾ ದುರ್ಮುಖನು ಮೇಲೆದ್ದು ಬಂದನು. ಅವನ



ಆ ಸಂಗತಿಯನ್ನು ಮರೆತು ಈ ರಾಜನನ್ನು ಕೊಲ್ಲುವುದು ಮಹಾ ಪಾಪ! ಅಂಥ ಹೀನಕಾರ್ಯ ನಾನು ಮಾಡುವೆನೆಂದು ಸ್ವಪ್ನದಲ್ಲೂ ತಿಳಿಯಬೇಡ! ಎಚ್ಚರ!" ಎಂದನು.

"ಆ ಗೊಡವೆ ನನಗಿಲ್ಲ. ಅದಕ್ಕೇ ನಾನು ಕೊಲ್ಲುವೆನೆಂದರೂ ಹೀಗೆ ತಡೆಯುವಿಯಲ್ಲಾ" ಎಂದನು ದುರ್ಮುಖ ರಾಜ. "ಇನ್ನೊಬ್ಬರು ಕೊಲ್ಲುವುದನ್ನೂ ನಾನು ಸಹಿಸಲಾರೆ! ಜಾಗ್ರತೆ!" ಎಂದು ಗರ್ಜಿಸಿದನು ಕಾಳೀವರ್ಮ. ಅಷ್ಟರೊಳಗೆ ಕೆಂಗಣ್ಣ ಮಾಂತ್ರಿಕನು ಕೆಳಗೆ ಬಿದ್ದಿದ್ದ ಮಂತ್ರದಂಡವನ್ನೆತ್ತಿಕೊಂಡು, "ಸಿಕ್ಕಿತು ನನ್ನ ಮಂತ್ರದಂಡ! ಕಾಳೀವರ್ಮಾ! ಚೆನ್ನಾಗಿ ಹೇಳಿದೆ! ನನ್ನ ಗುರುವಾದ ಭಲ್ಲೂಕಪಾದರ ಪ್ರಬಲ ವಿರೋಧಿ ತಾಂತ್ರಿಕ ಮಿಥ್ಯಾಮಿಶ್ರನು ಕಾಲದಂಡ ರಾಕ್ಷಸನನ್ನೂ, ತನ್ನ ಸೇವಕನಾದ ಜಂಬುಕೇಶ್ವರನನ್ನೂ ಕರೆದುಕೊಂಡು ಈ ಪ್ರಾಂತಕ್ಕೆ ಬಂದಿದ್ದಾನೆ. ಬಹುಶಃ ಅವನು ನನ್ನ ಗುರುವಿಗೆ ಏನೋ ಹಾನಿಮಾಡಿಯೇ ಬಂದಿರಬೇಕು. ನಾವೀಗ ಬೇಗನೇ ಭಲ್ಲೂಕಪಾದ ಪರ್ವತಕ್ಕೆ ಹೋಗಬೇಕು. ಇಲ್ಲಿನ ಗೊಡವೆಗಳನ್ನೆಲ್ಲಾ ಇಷ್ಟಕ್ಕೇ ಬಿಟ್ಟು ಹೊರಡು" ಎಂದನು.

"ಅದು ಹೇಗಾದೀತು? ನಾವು ಬಿಟ್ಟದ್ದುಬಿಟ್ಟು ಇದ್ದಕ್ಕಿದ್ದ ಹಾಗೆ ಹೋಗಿ ಬಿಟ್ಟರೆ ಇಲ್ಲಿ ಆ ತಾಂತ್ರಿಕನ ಉಪಟಳವನ್ನು ತಡೆಯುವುದು ಹೇಗೆ? ಅವನೀಗ ಸಾಮಂತ ಸೂರ್ಯಭೂಪತಿಯ ಕೋಟೆಯ ಕಡೆಗೆ ಹೋಗಿದ್ದಾನಂತೆ. ಆ ಕೋಟೆಯೊಳಗೆ ದೊಡ್ಡ ಸೈನ್ಯ ಕೂಡಾ ಇಲ್ಲವಂತೆ. ಆ ಧೂರ್ತ ತಾಂತ್ರಿಕನನ್ನು ಇದಿರಿಸುವವರೇ ಇಲ್ಲದಂತೆ ಮಾಡಿಹೋಗುವುದು ಒಳ್ಳೆಯದೇನು?" ಎಂದನು ಕಾಳೀವರ್ಮ.

ಕರಡಿಕೆಂಗಣ್ಣನು ಬೇಸರದಿಂದ, "ಆ ಸಮಾಚಾರವನ್ನೆಲ್ಲ ಸುರಂಗ ಮಾರ್ಗದೊಳಗೆ ಪ್ರವೇಶಿಸುವುದಕ್ಕೆ ಮೊದಲು ಸೂರ್ಯಭೂಪತಿಯ ಬಾಯಿಯಿಂದಲೇ

ಹಿಂದೆಯೇ ಕರಡಿಕೆಂಗಣ್ಣ ಮಾಂತ್ರಿಕನೂ ಮೇಲೆದ್ದು ಬರುವುದನ್ನು ಎಲ್ಲರೂ ನೋಡಿದರು!

ದುರ್ಮುಖರಾಜನು ಭೀಕರವಾಗಿ ಗರ್ಜಿಸಿ, ಒರೆಯಿಂದ ಕತ್ತಿಯನ್ನು ಸೆಳೆದು, "ಕಾಳೀವರ್ಮಾ! ನೀನೇನೋ ಕಷ್ಟದಲ್ಲಿ ಸಿಕ್ಕಿಬಿದ್ದೆಯೇನೋ ಅಂದುಕೊಂಡೆವು. ಪುಣ್ಯಕಾಲ! ಇನ್ನೂ ಈ ಜಿತಕೇತುವನ್ನು ಜೀವದಿಂದ ಬಿಟ್ಟಿರುವೆ ಏಕೆ? ಅವನ ಹತ್ತಿರ ಏನು ಮಾತುಕತೆ? ಸರಿ. ನಿನ್ನಿಂದಾಗದಿದ್ದರೆ ನಾನೇ ನನ್ನ ಕತ್ತಿಗೆ ಇವನನ್ನು ಬಲಿಹಾಕಿಬಿಡುತ್ತೇನೆ!" ಎಂದು ಜಿತಕೇತುವಿನ ಮೇಲೆ ನೆಗೆದನು.

ಕಾಳೀವರ್ಮನು ತಟಾಲ್ಲನೆ ದುರ್ಮುಖನ ಕತ್ತಿಗೆ ತನ್ನ ಕತ್ತಿಯನ್ನು ಅಡ್ಡ ಕೊಟ್ಟು, "ದುರ್ಮುಖ ರಾಜಾ! ಅವಸರಪಡಬೇಡ. ಈ ಜಿತಕೇತು ಮಹಾ ರಾಜನ ಉಪ್ಪುಂಡ ಶರೀರದಿಂದ ಹುಟ್ಟಿದವನು ನಾನು. ನನ್ನ ತಂದೆ ಈ ರಾಜನ ವಂಶಕ್ಕೆ ಸೇವೆ ಮಾಡುತ್ತ ಯುದ್ಧದಲ್ಲಿ ವೀರಸ್ವರ್ಗ ಸೇರಿದರು.



ಕೇಳಿದನು. ನಾವು ಈ ರಾಜರೊಳಗಿನ ಗೊಡವೆಗೆ ಏಕೆ ತಲೆಹಾಕಬೇಕು? ಅವರಿಗೇನು ಕಡಿಮೆ? ಸೈನಿಕ ಬಲವಿರುವಾಗ ಅವರವರೇ ನೋಡಿಕೊಳ್ಳುತ್ತಾರೆ. ನಾವೇಕೆ ಮಧ್ಯೆ?" ಎಂದನು.

ಕಾಳೀವರ್ಮನು ಕೋಪದಿಂದ ಕರಡಿಕೆಂಗಣ್ಣ ಮಾಂತ್ರಿಕನನ್ನು ನೋಡುತ್ತ, "ಈ ರಾಜ್ಯದಲ್ಲಿ ಹುಟ್ಟಿಬೆಳೆದ ನನ್ನ ಮುಂದೆಯೋ ನೀವು ಹೀಗೆ ಹೇಳುವುದು? ಮೊದಲು ಈ ರಾಜ್ಯದ, ಹಾಗೂ ಪ್ರಜೆಗಳ ಕ್ಷೇಮವನ್ನು ನೋಡದೆ ಎಲ್ಲಿಯೋ ಬೆಟ್ಟ ಪ್ರಾಂತದಲ್ಲಿರುವ ಮಾಂತ್ರಿಕರಿಗೆ ಸಹಾಯಮಾಡಲು ಹೋಗುವುದೆಂದರೇನು? ಇದು ಯಾವ ಧರ್ಮ? ಯಾವ ನ್ಯಾಯ? ನನ್ನನ್ನು ಅಂತಹ ದೇಶದ್ರೋಹಿ ಎಂದು ನೀವಾದರೂ ಹೇಗೆ ತಿಳಿದಿರಿ?" ಎಂದನು.

ಕಾಳೀವರ್ಮನ ಮಾತು ಕೇಳುತ್ತ ಕರಡಿಕೆಂಗಣ್ಣ ಮಾಂತ್ರಿಕನು ಅಪ್ರತಿಭನಾಗಿ, "ಶಿಷ್ಯಾ! ಕಾಳೀ! ನೀನು ಕೆಲವೇ ಕ್ಷಣಗಳಲ್ಲಿ ಹೇಗೆ ಬದಲಾಯಿಸಿಬಿಟ್ಟೆ! ಮಂತ್ರದಂಡವನ್ನು ತಂದುಕೊಟ್ಟವರಿಗೆ ಅರ್ಧರಾಜ್ಯ ವನ್ನೂ, ತನ್ನ ದತ್ತಪುತ್ರಿಯನ್ನೂ ಕೊಡುವೆನೆಂದು ಹೇಳುವ ಈ ಜಿತಕೇತು ರಾಜನ ಮಾತುಗಳನ್ನು ನಂಬಿ ಮೋಸಹೋಗಬೇಡ!" ಎಂದನು.

"ನನ್ನ ಅಭಿಪ್ರಾಯದಲ್ಲಿ ಅರ್ಧರಾಜ್ಯವೂ ಇಲ್ಲ, ರಾಜಕುಮಾರಿಯೂ ಇಲ್ಲ; ಮೋಸಹೋಗುವ ಪ್ರಶ್ನೆ ಮೊದಲೇ ಇಲ್ಲ. ಮಂತ್ರದಂಡವನ್ನು ಕೊಟ್ಟದ್ದು ಮಹಾರಾಜರಿಗಲ್ಲ, ನಿಮಗೆ!" ಎಂದು ಕಾಳೀ ವರ್ಮನು ಜಿತಕೇತು ರಾಜನನ್ನು ನೋಡಿದನು.

ಜಿತಕೇತು ರಾಜನು ತಲೆಯಾಡಿಸುತ್ತ, "ಇಲ್ಲಿರುವ ದುರ್ಮುಖ ರಾಜನ ಸಮಕ್ಷಮದಲ್ಲಿ..." ಎನ್ನುವಷ್ಟ ರಲ್ಲಿ ಸುರಂಗದೊಳಗಿನಿಂದ ಉಗ್ರದಂಡ ರಾಕ್ಷಸನು, ಕಲ್ಲಿನ ಗದೆಯನ್ನು ಮೇಲೆತ್ತಿಕೊಂಡು ಗರ್ಜಿಸುತ್ತ, ಮೇಲೆದ್ದು ಬಂದು, "ದುರ್ಮುಖರಾಜ ಮಾತ್ರ ವಲ್ಲ, ನಾನೂ ಇದ್ದೇನೆ! ಅಕೋ! ಕಟುಕನರ ಭಲ್ಲೂಕನೂ ಬರುತ್ತಿದ್ದಾನೆ! ರಾಜಾ! ನೀನು ಹೇಳುವ ಮಾತನ್ನು ನಮ್ಮೆಲ್ಲರ ಸಾಕ್ಷಿಗಳ ಸಮಕ್ಷಮ ದಲ್ಲೇ ಹೇಳಿಬಿಡು!" ಎಂದನು.

ಜಿತಕೇತು ರಾಜನು ಉಗ್ರದಂಡ ರಾಕ್ಷಸನನ್ನು ನೋಡಿ, ಮೊದಲು ಭಯಕಂಪಿತನಾದರೂ, ಅನಂತರ ಧೈರ್ಯ ತಂದುಕೊಂಡು, "ಕೇಳಿರಿ ಹಾಗಾದರೆ. ನನಗೆ ಸಂತಾನವೇ ಇಲ್ಲ, ನನ್ನ ತರುವಾಯ ಯಾರನ್ನು ವಾರಸನಾಗಿರಿಸಲಿ ಎಂದು ಆಲೋಚಿಸುತ್ತಾ ಇದ್ದೆನು. ಈಗ ಆಕಸ್ಮಿಕವಾಗಿ ಒಳ್ಳೆಯ ಅವಕಾಶ ಲಭ್ಯವಾಗಿದೆ. ಸಾಮಂತ ಸೂರ್ಯಭೂಪತಿಯ ಕುಮಾರಿಯೇ ನನ್ನ ದತ್ತ ಪುತ್ರಿ. ಅವಳನ್ನೇ ಕಾಳೀವರ್ಮನಿಗೆ ಕೊಟ್ಟು ಮದುವೆ ಮಾಡಿಸುತ್ತೇನೆ. ಬರಿಯ ಅರ್ಧರಾಜ್ಯವಲ್ಲ, ನನ್ನ ತರುವಾಯ ಈ ಚಂದ್ರಶಿಲಾ ನಗರಕ್ಕೆ ಕಾಳೀ ವರ್ಮನೇ ರಾಜ!" ಎಂದನು.

"ಜೈ! ಭಲ್ಲೂಕಪಾದ ಗುರೂ!" ಎಂದು ಕರಡಿ ಕೆಂಗಣ್ಣ ಮಾಂತ್ರಿಕನು ಉತ್ಸಾಹದಿಂದ ಘೋಷಿಸಿ,

"ಸಾಧ್ಯಾಸಾಧ್ಯತೆಗಳನ್ನು ಯೋಚಿಸದೆ, ಇಲ್ಲಿ ಗಾಳೀಗೋಪುರ ಕಟ್ಟುತ್ತಿದ್ದೀರಿ! ದುಷ್ಟನಾದ ಆ ಮಿಥ್ಯಾಮಿಶ್ರ ತಾಂತ್ರಿಕನು ಸೂರ್ಯಭೂಪತಿಯ ಏಕೈಕ ಪುತ್ರಿಯನ್ನು ಸೆರೆ ಹಿಡಿದು ಇಷ್ಟರಲ್ಲೇ ತನ್ನ ಪರ್ವತ ಪ್ರಾಂತದ ಕಡೆಗೆ ಹೊರಟುಹೋಗಿದ್ದಾನು. ಅವನಿಗೆ ತನ್ನ ಇಷ್ಟ ದೈವವಾದ ಭಲ್ಲೂಕೇಶ್ವರೀ ದೇವಿಗೆ ಒಬ್ಬಳು ಪೂಜಾರಿಣಿಯನ್ನು ಏರ್ಪಡಿಸ ಬೇಕೆಂದು ಬಹಳ ಕಾಲದ ಆಶೆ." ಎಂದನು.

"ನಾನು ಬದುಕಿರುವಾಗ ಅವನ ಆಶೆ ನೆರವೇರು ವಂತಿಲ್ಲ," ಎಂದು ಕಾಳೀವರ್ಮನು ಕತ್ತಿ ಎತ್ತಿ ಕುಣಿಸಿದನು. "ನಾನೂ ಅದೇ ಪ್ರತಿಜ್ಞೆ ಮಾಡು ತ್ತೇನೆ ಕಾಳೀ!" ಎಂದು ಗರ್ಜಿಸುತ್ತ ಉಗ್ರದಂಡ ರಾಕ್ಷಸನೂ ತನ್ನ ಗದೆಯನ್ನೆತ್ತಿ ಆಡಿಸಿದನು.

ಕರಡಿಕೆಂಗಣ್ಣ ಮಾಂತ್ರಿಕನು ಕಿರುನಗು ಸೂಸುತ್ತ, "ಹೂಂ! ನಿಮ್ಮ ಪ್ರತಿಜ್ಞೆ ನೆರವೇರಬೇಕೆಂತಲೇ ನಾನೂ ಹಾರೈಸುತ್ತೇನೆ. ಉಗ್ರದಂಡಾ! ಹತ್ತ ರೊಂದಿಗೆ ಹನ್ನೊಂದಾಗಿ ಆ ತಾಂತ್ರಿಕ ಮಿಥ್ಯಾಮಿಶ್ರ ನಿಂದ ನಿನ್ನ ಅಣ್ಣನನ್ನು ಕೂಡಾ ರಕ್ಷಿಸು. ಅವನಿಗೆ ಏನೋ ಮದ್ದು ಮಾಯೆಮಾಡಿ ಬುದ್ಧಿ ಕೆಡಿಸಿ ತನ್ನ ಇಷ್ಟಪ್ರಕಾರ ಆಡುವಂತೆ ಮಾಡಿಕೊಂಡಿದ್ದಾನೆ ಆ ತಾಂತ್ರಿಕಾಧಮ. ಸರಿ, ನಾನು ಹೊರಡುತ್ತೇನೆ" ಎಂದು ಸುರಂಗ ದ್ವಾರದ ಕಡೆಗೆ ನಡೆದನು. ಅವನು ಸುರಂಗ ದ್ವಾರದಲ್ಲಿ ಇಳಿಯುವುದರೊಳಗೆ ಗಿಡಗಳ ಹಿಂದೆ ಅಡಗಿದ್ದ ಕಟುಕಕರಡಿಯವನು, "ಓ ಶಿರೀಷವನ ಭೈರವಾ!" ಎಂದು ಕೂಗಿ ಎದ್ದು ಹಾರಿ ಬಂದು, "ಅಯ್ಯಾ! ಮಾಂತ್ರಿಕೇಶ್ವರಾ! ನಿಮ್ಮ ಮಂತ್ರದ ಕಾರಣದಿಂದಾಗಿ ಅರ್ಧ ಮನುಷ್ಯನಾಗಿರುವ ನನ್ನ ಗತಿ ಏನು? ನೀವೂ ನಾನೂ, ನಿಮ್ಮ ಗುರುಗಳೂ ಭಲ್ಲೂಕ ಮುದ್ರೆಯ ಕರಡಿಗಳಾಗಿ ದೊಡ್ಡ ಗಲಾಟೆಗೆ ಕಾರಣವಾಯಿತು. ಈಗ ನನ್ನನ್ನು ನೀವು ಮೊದಲಿ ನಂತೆ ಮಾಡದಿದ್ದರೆ, ಈ ಕೊಡಲಿಯಿಂದ ನಿಮ್ಮ ಕುತ್ತಿಗೆ ಕಡಿದು ಕೆಡವುತ್ತೇನೆ. ನಾನೀಗ ಜೀವದಾಸೆ ಬಿಟ್ಟವನು." ಎಂದು ತನ್ನ ಚಪಗೊಡಲಿಯನ್ನು ಎತ್ತಿ ಹಾರಲು ಸಿದ್ಧನಾದನು.

"ದುಡುಕದಿರು ಮೊರಟು ಶಿಷ್ಯಾ! ನೀನು ಕಟುಕ ಕರಡಿ ಮನುಷ್ಯನಲ್ಲ. ಈ ನಗರದ ಕಟುಕರ ಪ್ರಧಾನ ನಾಯಕ. ಇನ್ನು ನಿನ್ನ ಶಿರೀಷವನಕ್ಕೆ ಹೋಗಿ ಅಪರಾಧಿಗಳಾಗಿ ಶಿಕ್ಷೆಪಡೆದು ಬರುವವರ ತಲೆಗಳನ್ನು ಮಾತ್ರ ಕಡಿ!" ಎಂದು ಹೇಳುತ್ತ ಮಂತ್ರದಂಡವನ್ನು ಅವನ ತಲೆಯಮೇಲಿಟ್ಟು ಮೂರುಸಾರಿ ಮಂತ್ರೋ ಚ್ಚಾರಮಾಡುತ್ತ ತಡವಿದನು. ಮರುಕ್ಷಣದಲ್ಲಿ ಸುರಂಗದೊಳಗೆ ಟಣ್ಣನೆ ಜಿಗಿದು ಮಾಯವಾದ ಕರಡಿಕೆಂಗಣ್ಣ.

—(ಮುಂದಿನ ಸಂಚಿಕೆಯಲ್ಲಿ ಮುಕ್ತಾಯ)






# ರಾಕ್ಷಸಸಮಸ್ಯೆ

**ಬೇ**ತಾಳಕ್ಕೊಂದು ಬೆಂಬಿಡದ ಭೂತದಂತೆ ರಾಜಾ ತ್ರಿವಿಕ್ರಮನು ಅದನ್ನು ಅನುಸರಿಸಿ ಮತ್ತೆ ಮರದ ಬಳಿಗೆ ಹಿಂದಿರುಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲಿಗೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯುವಾಗ, ಬೇತಾಳವು ಮಾತಾಡಲು ತೊಡಗಿ, "ಎಲೈ ಶುಂಠ ರಾಜನೇ, ಯಾಕೆ ಹೇಳುವುದೆಂದು ಸುಮ್ಮನಿದ್ದರೂ, ಹೇಳಲೇ ಬೇಕಾಗಿದೆ, ನಿನ್ನ ಈ ಬಗೆಯ ನಡತೆ ರಾಜನೀತಿಗೆ ಅನುಗುಣವಾಗಿದೆಯೆಂದು ನನಗೆ ತೋರುವುದಿಲ್ಲ. ನಿನ್ನ ಹಾಗೆಯೇ ನಿರಂಕುಶ ಮಹಾರಾಜನೂ ರಾಜನೀತಿಗೆ ವಿರುದ್ಧವಾಗಿಯೇ ವರ್ತಿಸಿದನು. ಆ ಸಮಾಚಾರದ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ದಾರಿಯ ಶ್ರಮವನ್ನು ಮರೆತು ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು:

ಒಂದಾನೊಂದು ಕಾಲದಲ್ಲಿ ನಿಕುಂಜವೆಂಬ ದೇಶವಿದ್ದಿತು. ಆ ದೇಶದ ರಾಜನಾಗಿ ನಿರಂಕುಶನು ಪರಿಪಾಲಿಸಿಕೊಂಡಿರುವಾಗ, ಆ ದೇಶದ ಸರಿಹದ್ದಿನಲ್ಲಿರುವ ಅರಣ್ಯದಲ್ಲಿ ಒಬ್ಬ ರಾಕ್ಷಸನಿರುವಂತೆ ವಾರ್ತೆಗಳು ಬರತೊಡಗಿದುವು. ಅನೇಕಮಂದಿ ಅರಣ್ಯವಾಸಿಗಳು

ಬೇತಾಳಕಥೆಗಳು



ಆ ರಾಕ್ಷಸನಿಗೆ ಹೆದರಿ, ಅರಣ್ಯವನ್ನು ಬಿಟ್ಟು ಓಡಿ ಬಂದು, ರಾಜನೊಂದಿಗೆ ಆ ಸಮಾಚಾರವನ್ನು ಹೇಳಿಕೊಂಡರು.

ಆ ಮಾತನ್ನು ನಂಬಲು ರಾಜನಿಗೆ ಸಾಧ್ಯವಾಗಲಿಲ್ಲ. ಕಲಿಯುಗ ಬಂದು ಇಷ್ಟು ಸಾವಿರ ವರುಷಗಳಾದ ಮೇಲೆ, ಪ್ರಪಂಚದಲ್ಲಿ ಇನ್ನೂ ರಾಕ್ಷಸರಿದ್ದಾರೆಂದರೆ ಹೇಗೆ ತಾನೇ ನಂಬಲು ಸಾಧ್ಯ? ಆದರೂ ರಾಜನು ಆಟವಿಕ ನಿವಾಸಿಗಳನ್ನು ಪ್ರಶ್ನಿಸಿ, ಆ ರಾಕ್ಷಸನು ಅವರಾರಿಗೂ ಯಾವ ಬಗೆಯ ಹಾನಿಯನ್ನೂ ಮಾಡಲಿಲ್ಲವೆಂದು ಅರಿತನು. ಅವರು ಹೆದರಲು ಕಾರಣ ರಾಕ್ಷಸಾಕಾರದ ಭಯವೇ ಹೊರತು ಬೇರೆ ಕಾರಣವಿಲ್ಲವೆಂಬುದೂ ಗೊತ್ತಾಯಿತು.

"ಅವನು ರಾಕ್ಷಸನೆಂದು ನಿಮಗೆ ಹೇಗೆ ಗೊತ್ತಾಯಿತು? ಮರದಷ್ಟು ಎತ್ತರವಾಗಿದ್ದಾನೇನು?" ಎಂದು ರಾಜನು ಅವರನ್ನು ಕೇಳಿದನು. ಅರಣ್ಯವಾಸಿಗಳು ಸಂದೇಹಪಡುತ್ತ, "ಮಹಾ ಪ್ರಭುಗಳೇ! ಅವನು ಮರದಷ್ಟು ಎತ್ತರವಿಲ್ಲದಿದ್ದರೆ ಏನಾಯಿತು? ದೊಡ್ಡದೊಂದು ಕಾಡುಕೋಣದ ಪ್ರಮಾಣದಲ್ಲಿದ್ದಾನೆ! ಒಂದೇ ಏಟಿಗೆ ದೊಡ್ಡ ಮರಗಳನ್ನು ಉರುಳಿಸಿಬಿಡುವಷ್ಟು ಬಲಶಾಲಿಯಾಗಿದ್ದಾನೆ. ಅವನ ಭಯದಿಂದ ಕಾಡಿನಲ್ಲಿ ವಾಸಮಾಡುವುದೇ ಕಷ್ಟವಾಗಿದೆ. ಯಾರಿಗೂ ನಿದ್ದೆಯಿಲ್ಲ." ಎಂದರು.

"ಅವನನ್ನು ರಾಕ್ಷಸನೆಂದು ಹೇಗೆ ಅಂದುಕೊಳ್ಳುವಿರಿ?" ಎಂದು ರಾಜನು ಪುನಃ ಅವರನ್ನು ಕೇಳಿದನು.

"ಮಹಾಪ್ರಭುಗಳೇ! ನಾವು ಅಡಗಿಕೊಂಡು ಕಣ್ಣಾರೆ ನೋಡಿದೆವು. ಅವನು ಒಂದು ಮರದ ಕೆಳಗೆ ಕುಳಿತುಕೊಂಡು ಯಾವುದೋ ಗಡ್ಡೆಗಳನ್ನೂ ಗೆಣಸುಗಳನ್ನೂ ಕಡಿದು ಕಡಿದು ತಿನ್ನುತ್ತಾ ಇದ್ದ. ಪಕ್ಕದಲ್ಲಿದ್ದ ಪೊದರಿನ ಮರೆಯಲ್ಲಿ ಅವನನ್ನು ಹೊಂಚುತ್ತಾ ಇದ್ದ ಹೆಬ್ಬುಲಿಯೊಂದು ಅವನ ಮೇಲೆ ಹಾರಿತು. ಅವನು ಏನೂ ಗಾಬರಿ ಬೀಳದೆ ಅದರ ಹಿಂದಿನ ಕಾಲುಗಳನ್ನು ಹಿಡಿದು ಎತ್ತಿ ಬೀಸಿ ಮರದ ಬೊಡ್ಡೆಗೆ ಹೊಡೆದು ಕೊಂದುಬಿಟ್ಟನು. ಅವನು ರಾಕ್ಷಸನಲ್ಲದಿದ್ದರೆ ಹಾಗೆಮಾಡಲು ಸಾಧ್ಯವೆ? ಅಲ್ಲದೆ ಮಹಾಪ್ರಭು! ಅವನ ಹತ್ತಿರ ಬಾಣಗಳೋ ಬಲ್ಲೆಗಳೋ ಯಾವ ಆಯುಧವೂ ಇಲ್ಲ. ಆದರೂ ಅವನು ಒಂದೇ ಹಾರಿಕೆಗೆ ಜಿಂಕೆಗಳನ್ನೂ, ಎರಳೆಗಳನ್ನೂ ಹಿಡಿದು ಬೆಂಕಿಯಲ್ಲಿ ಸುಟ್ಟು ತಿನ್ನುತ್ತಾನೆ. ಇದನ್ನು ದೂರದಿಂದ ಬಹಳಮಂದಿ ನೋಡಿ ನಮ್ಮ ಹತ್ತಿರ ಹೇಳಿದ್ದಾರೆ" ಎಂದರು.

ರಾಜನು ಸ್ವಲ್ಪ ಹೊತ್ತು ಆಲೋಚನೆಮಾಡಿ, "ಸರಿ. ನೀವೇನೂ ಹೆದರಬೇಡಿ. ಆ ರಾಕ್ಷಸನ ಸಂಗತಿ ನಾನು ನೋಡಿಕೊಳ್ಳುತ್ತೇನೆ. ನೀವು ಭಯಪಡುವಂತಹ ಕಾರಣವೇನೂ ಇಲ್ಲವೆಂದು ಕಾಣುತ್ತದೆ. ಅವನು ನಿಮಗೇನಾದರೂ ಅಪಕಾರಮಾಡಿದರೆ ಕೂಡಲೇ ನಮಗೆ ತಿಳಿಸಿಬಿಡಿರಿ. ನಾನು ಅವನಿಂದ ಯಾವ ಭಯವೂ ಇಲ್ಲದಂತೆ ಮಾಡುತ್ತೇನೆ. ಆದರೂ

ನಿಮಗೆ ಭಯವಾಗಿದ್ದರೆ ನಿಮ್ಮ ವಾಸಕ್ಕೆ ನಗರದ ಒಂದು ಭಾಗವನ್ನು ಏರ್ಪಡಿಸಿ ಕೊಡುತ್ತೇನೆ. ಭಯ ಹೋಗುವವರೆಗೆ ಆ ಭಾಗದಲ್ಲಿದ್ದು, ಸಾಧ್ಯವಾದಷ್ಟು ಆ ರಾಕ್ಷಸನ ಚಲನವಲನ ಗಮನಿಸಿರಿ. ಏನಾಗುವುದೋ ನೋಡಿ ಅದಕ್ಕೆ ತಕ್ಕ ಹಾಗೆ ನಿವೃತ್ತಿ ಮಾಡೋಣ" ಎಂದನು.

ಆಟವಿಕರು ಅನುಮಾನಪಡುತ್ತ ಒಬ್ಬರನ್ನೊಬ್ಬರು ನೋಡಿಕೊಂಡು, ಏನೋ ಗೊಣಗಿಕೊಳ್ಳುತ್ತ ಹೊರಟುಹೋದರು.

ಅವರೆಲ್ಲ ಹೋದಮೇಲೆ ಮಂತ್ರಿ ಕಳವಳಪಡುತ್ತ ರಾಜನನ್ನು ನೋಡಿ, "ಅದೇನು ಮಹಾರಾಜರೇ, ನೀವು ಆ ರಾಕ್ಷಸನನ್ನು ಕೊಲ್ಲುವ ಆಲೋಚನೆಯಲ್ಲಿಲ್ಲವೇನು? ಅಥವಾ ಅವರು ಹೇಳಿದ ಮಾತಿನಲ್ಲಿ ನಿಮಗೇನೂ ನಂಬುಗೆ ಯಿಲ್ಲವೇ?" ಎಂದು ಕೇಳಿದನು.

"ಇಲ್ಲ. ಏಕೆ ಕೇಳುವಿರಿ?" ಎಂದು ಕೇಳಿದನು ರಾಜ. "ಅವನನ್ನು ಕಣ್ಣಾರೆ ಕಂಡ ಸಂಗತಿ ಗೊತ್ತಾಗಿದೆ. ಹೆಬ್ಬುಲಿಯನ್ನು ಬರಿಗೈಯಿಂದ ಕೊಲ್ಲಬಲ್ಲಂತಹವನು, ಸಾಧಾರಣ ಮನುಷ್ಯರಿಗೆ ಕೇಡುಮಾಡದೆ ಬಿಡುವನೇನು? ಅವನಬಗ್ಗೆ ಉಪೇಕ್ಷೆಮಾಡುವುದು ಒಳ್ಳೆಯದಲ್ಲವೆಂಬುದು ನನ್ನ ಅಭಿಪ್ರಾಯ. ಹೇಗಾದರೂ ಮಾಡಿ ಅವನನ್ನು ಕೊಲ್ಲಲೇಬೇಕು." ಎಂದನು ಮಂತ್ರಿ.

ಕ್ರೂರಮೃಗಗಳನ್ನು ಕೂಡಾ ಅವುಗಳಿಂದ ಪ್ರಜೆಗಳಿಗೆ ಹಾನಿಯಾದರೆ ಮಾತ್ರವೇ ಬೇಟೆಯಾಡಿ ಕೊಲ್ಲುತ್ತೇವೆ. ಇಲ್ಲದಿದ್ದರೆ ಕೊಲ್ಲಲಾರೆವಷ್ಟೆ? ಈ ರಾಕ್ಷಸನನ್ನು ಮಾತ್ರ ಸುಮ್ಮ ಸುಮ್ಮನೆ ಏಕೆ ಕೊಲ್ಲಬೇಕು?" ಎಂದು ಕೇಳಿದನು ರಾಜ.

"ಮಹಾರಾಜಾ! ನಿಮ್ಮ ಆಲೋಚನೆಯ ಆಳ ಗೊತ್ತಾಗುವುದಿಲ್ಲ. ಅವನು ಕ್ರೂರಮೃಗಗಳಿಗೇ ಕ್ರೂರನಾಗಿದ್ದಾನೆ! ರಾಕ್ಷಸ ಬೇರೆ! ರಾಕ್ಷಸ ಜಾತಿಯೆಂದರೆ ಮಾನವರಿಗೆ ಶತ್ರುಗಳುತಾನೇ? ಅವನನ್ನು ಸಂಹರಿಸಬೇಕಾದುದು ನಮ್ಮ ಕರ್ತವ್ಯವೆಂಬುದನ್ನು ಆಕ್ಷೇಪಿಸುವಿರೇಕೋ?" ಎಂದನು ಮಂತ್ರಿ.

ರಾಜನು ಸ್ವಲ್ಪ ಆಲೋಚಿಸಿ, "ಮಂತ್ರಿವರ್ಯಾ! ನಿಮ್ಮ ಅಭಿಪ್ರಾಯ ಹೀಗಿರುವುದಾದರೆ, ಆ ರಾಕ್ಷಸ





ನನ್ನು ಕೊಲ್ಲುವ ಪ್ರಯತ್ನವನ್ನು ನೀವೇಮಾಡಿರಿ ನಿಮಗೆ ತೋರಿದಂತೆ ಕೊಲ್ಲಿರಿ. ಎಷ್ಟು ಸಹಾಯ ಬೇಕಾದರೂ ತೆಗೆದುಕೊಳ್ಳಿರಿ." ಎಂದನು.

ಈ ಮಾತು ಕೇಳಿ ಮಂತ್ರಿಗೆ ತುಂಬ ಸಮಾಧಾನವೆನಿಸಿತು. ಅವನು ಕೂಡಲೇ ಉಪ ಸೇನಾನಾಯಕನೊಬ್ಬನನ್ನು ಕರೆಯಿಸಿ, "ನೀನು ಕೆಲಮಂದಿ ಸಾಯುಧ ವೀರರೊಂದಿಗೆ ಹೋಗಿ ಅರಣ್ಯದೊಳಗೆಲ್ಲಾ ಹುಡುಕಿ. ರಾಕ್ಷಸನು ಎಲ್ಲಿರುವನೆಂದು ತಿಳಿದು. ಅವನನ್ನು ಕೊಂದು ಅವನ ಶವವನ್ನು ಸಾಗಿಸಿಕೊಂಡು ಬಾ" ಎಂದು ಆಜ್ಞೆಮಾಡಿದನು.

ಆ ಉಪಸೇನಾನಾಯಕನಿಗೆ ಭಯವೆಂದರೇನೆಂಬುದೇ ತಿಳಿಯದು. ಯುದ್ಧರಂಗದಲ್ಲಿ ಅವನು ಮದ್ದಾನೆಗಳನ್ನು ಇದಿರಿಸಿ ಕೊಂದವನು.

ಅವನು ಇಪ್ಪತ್ತುಮಂದಿ ಸಾಯುಧರಾದ ಭಟರೊಂದಿಗೆ ಅರಣ್ಯಕ್ಕೆ ಹೋದನು. ಸ್ವಲ್ಪ ಹೊತ್ತು ಹುಡುಕುವಷ್ಟರಲ್ಲೇ ಅವನಿಗೆ ರಾಕ್ಷಸನ ಜಾಡು ತಿಳಿಯಿತು. ಒಂದು ದೊಡ್ಡ ಹುಲಿಯ ವಿಕೃತವಾದ ಆರ್ತನಾದವನ್ನು ಕೇಳಿ ಅವರು ಆ ಕಡೆಗೆ ಹೋದರು. ಅಲ್ಲಿ ರಾಕ್ಷಸನು ಒಂದು ಹುಲಿಯನ್ನು ಅಂಗಾತ ಬೀಳಿಸಿ ಅದರ ಹಿಂದಿನ ಕಾಲುಗಳನ್ನು ಜೋಡಿಸಿ ಹಿಡಿದುಕೊಂಡು, ಹೊಟ್ಟೆಯ ಮೇಲೂ ಕಂಠದ ಮೇಲೂ ಕಾಲುಗಳಿಂದ ಕಚಕಚ ತುಳಿಯುತ್ತಿದ್ದನು. ರಾಜಭಟರು ನೋಡುತ್ತಿದ್ದಂತೆ, ಹುಲಿ ನೆತ್ತರು ಕಾರಿ ಪ್ರಾಣಬಿಟ್ಟಿತು. ಅನಂತರ ರಾಕ್ಷಸನು ಹುಲಿಯನ್ನು ಬಿಟ್ಟು ತಲೆಯೆತ್ತಿ ಆಚೆ ಈಚೆ ನೋಡಿದನು. ಅವನ ದೃಷ್ಟಿ ತಮ್ಮ ಮೇಲೆ ಬಿದ್ದ ಕೂಡಲೇ ಸೈನಿಕ ನಾಯಕನೊಂದಿಗೆ ಬಂದ ಭಟರೆಲ್ಲ ಕಿಟ್ಟನೆಕಿರಿಚಿ ಬದುಕಿದರೆ ಬೇಡಿ ತಿಂದೇವೆಂಬಂತೆ, ಓಡಿಹೋಗಿಬಿಟ್ಟರು.

ಆದರೆ ನಾಯಕನು ಮಾತ್ರ ಹೆದರದೆ ಕತ್ತಿಹಿರಿದು ದೃಢವಾಗಿ ನಿಂತು ರಾಕ್ಷಸನೊಂದಿಗೆ ಯುದ್ಧಮಾಡಲು ಸಿದ್ಧನಾದನು. ಆ ರಾಕ್ಷಸನು ಒಬ್ಬ ಉದ್ದನ್ನ ಮನುಷ್ಯನಿಗಿಂತ ಒಂದು ಮೊಳದಷ್ಟು ಹೆಚ್ಚು ಎತ್ತರವಾಗಿದ್ದನು. ಆದರೆ ಅವನ ಶರೀರದಾರ್ಢ್ಯವು ಮಾತ್ರ ವರ್ಣನಾತೀತವೆನಿಸುವಂತಿದ್ದಿತು. ಒಂದೇ ಗುದ್ದಿಗೆ ಮರವನ್ನು ಕೆಡವಬಲ್ಲವನೇ ಸರಿ!

ಅವನು ಆ ಹೆಬ್ಬುಲಿಯ ಶವವನ್ನು ಬೆಕ್ಕಿನ ಹಾಗೆ ಒಂದೇ ಕೈಯಿಂದ ಎತ್ತಿ ಪೊದೆಗಳಾಚೆಗೆ ದೂರ ಬಿಸುಟು ಕೈಗಳನ್ನು ಒರೆಸಿ ಕೊಳ್ಳುತ್ತ, ವೀರನಾಯಕನ ಕಡೆಗೆ ಬಂದು, "ಏನು ನೋಡುತ್ತೀ? ಏಕೆ ಬಂದೆ?" ಎಂದು ಮಾನವ ಭಾಷೆಯಲ್ಲೇ ಕೇಳಿದನು.

ವೀರನಾಯಕನಿಗೆ ಆಶ್ಚರ್ಯವಾಯಿತು. ಇವನು ಮಾನವನೇ ಆದರೆ ಕೊಲ್ಲುವುದೇನೂ ಕಷ್ಟವಿಲ್ಲ ಅಂದುಕೊಂಡು. "ರಾಜಾಜ್ಞೆಯಂತೆ ನಿನ್ನನ್ನು ಕೊಲ್ಲಲಿಕ್ಕೆ ಬಂದಿದ್ದೇನೆ. ನೀನೀಗ ನನ್ನ ಕೈಯಲ್ಲಿ ಸಾಯುವಿ!" ಎನ್ನುತ್ತ ಕತ್ತಿ ಎತ್ತಿದನು ವೀರನಾಯಕ.

"ಸಾಯುವುದು ನಾನಲ್ಲ ನೀನು!" ಎನ್ನುತ್ತ ರಾಕ್ಷಸನು ವೀರನಾಯಕನ ಕತ್ತಿಯ ಕೈಯ ಮೇಲೆ

ಹೊಡೆದು, ಕೆಳಗೆಬಿದ್ದ ಕತ್ತಿಯನ್ನು ಕಾಲಿನಿಂದ ತುಳಿದು ಮುರಿದು " ಹೋಗು " ಎಂದನು.

ಮಂತ್ರಿ ಕಳುಹಿಸಿದ ವೀರನಾಯಕನು ಕೈಯನ್ನು ಹಿಸುಕಿಕೊಳ್ಳುತ್ತಾ ಹಿಂದಿರುಗಿ ಹೋಗಿ, ನಡೆದ ಸಂಗತಿಯನ್ನು ಮಂತ್ರಿಯೊಂದಿಗೆ ಹೇಳಿದನು. ಮಂತ್ರಿ ಆ ಸಮಾಚಾರವನ್ನು ರಾಜನೊಂದಿಗೆ ಹೇಳಿ, " ಇನ್ನೇನು ಮಾಡೋಣ ?" ಎಂದು ಕೇಳಿದನು.

" ಏನೂ ಮಾಡಬೇಕಾಗಿಲ್ಲ. ನೀವು ನಿಮ್ಮ ಕೆಲಸ ನೋಡಿ ಕೊಂಡಿರಿ, ಸಾಕು " ಎಂದನು ರಾಜ.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ರಾಕ್ಷಸನನ್ನು ಕುರಿತು ನಿರಂಕುಶ ಮಹಾರಾಜನು ಮೊದಲಿನಿಂದಲೂ ಉದಾಸೀನನಾಗಿರಲು ಕಾರಣ ವೇನು ? ರಾಕ್ಷಸರೊಂದಿಗೆ ಗೊಡವೆ ತಂದುಕೊಂಡರೆ ಅಪಾಯವೆಂತಲೇ? ರಾಕ್ಷಸ ಜಾತಿ ಮಾನವ ಜಾತಿಗೆ ಶತ್ರುವಲ್ಲವೇನು ? ಪ್ರಾರಂಭದಲ್ಲಿ ಅವನು ಆಟ ವಿಕರ ಮಾತನ್ನು ನಂಬದಿರಬಹುದು. ಆದರೆ ತನ್ನ ಕಡೆಯ ವೀರರು ಸ್ವಯಂ ರಾಕ್ಷಸನನ್ನೂ ಅವನ ಶಕ್ತಿಯನ್ನೂ ಕಣ್ಣಾರೆ ನೋಡಿ ಬಂದಿರುವಾಗ ರಾಜನು ತನ್ನ ಸೇನೆಗಳೆಲ್ಲವನ್ನೂ ಉಪಯೋಗಿಸಿ ಅವನನ್ನು ಕೊಲ್ಲುವ ಪ್ರಯತ್ನ ಮಾಡಬೇಕಿತ್ತೋ ಬೇಡವೋ ? ನಿರಂಕುಶರಾಜನು ಹಾಗೇಕೆ ಮಾಡಲಿಲ್ಲ ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆಯೊಡೆದು ಪುಡಿಯಾಗಿ ಹಾರುತ್ತದೆಂದು ತಿಳಿ! " ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : " ರಾಜನ ಧೋರಣೆ ಸರಿಯೇ. ರಾಕ್ಷಸರು ಕೂಡಾ ಮಾನವರೊಳಗೆ ಒಂದು ಜಾತಿಯವರೇ. ರಾಜ್ಯಾಂಗದೊಳಗೆ ಎಲ್ಲಾ ಜಾತಿಯವರಿಗೂ ಬದುಕಿಕೊಂಡಿರುವ ಹಕ್ಕು ಕೊಡಲ್ಪಟ್ಟಿದೆ. ಒಂದು ಜಾತಿಗೆ ಸೇರಿದವರನ್ನೋ, ಒಂದುಕುಲಕ್ಕೆ ಸೇರಿದವರನ್ನೋ ಯಾವ ತಪ್ಪೂ ಇಲ್ಲದೆ ದಂಡಿಸುವುದು ರಾಜನೀತಿಯಾಗಲಾರದು. ಪುರಾಣ ಕಾಲದಲ್ಲಿ ಕೂಡಾ ಮಾನವ ಜಾತಿಗೆ ಹಾನಿ ಗೊಳಿಸಿದ ರಾಕ್ಷಸರನ್ನಷ್ಟೇ ವಿಷ್ಣು ಮಾನವರೂಪದಲ್ಲಿ ಬಂದು ಕೊಂದನೆಂದು ಕೇಳಿದ್ದೇವೆ. ತಪ್ಪು ಮಾಡಿದ ವ್ಯಕ್ತಿಯನ್ನು ದಂಡಿಸಬೇಕಾದುದಷ್ಟೇ ರಾಜನೀತಿ. ಆ ರಾಕ್ಷಸನುಕೂಡಾ ಒಂದು ವ್ಯಕ್ತಿತಾನೇ ? ಅವನು ತನ್ನನ್ನು ಕೊಲ್ಲಲು ಬಂದ ವೀರನಾಯಕನನ್ನೇ ಕೊಲ್ಲದೆ ಬಿಟ್ಟಿರುವಾಗ, ಯಾವ ಗೋಜಿಗೂ ಬಾರದ ಸಾಧಾರಣ ಮನುಷ್ಯರನ್ನು ಏಕೆ ಕೊಲ್ಲುತ್ತಾನೆ ? ಮಂತ್ರಿ ಪ್ರಕಟಪಡಿಸಿದ ಜಾತಿ ದ್ವೇಷವು ರಾಜ ನೀತಿಗೆ ವಿರುದ್ಧವಾದುದು "

ಹೀಗೆ ರಾಜನಿಗೆ ಮೌನ ಭಂಗವಾದ ಕೂಡಲೇ, ಬೇತಾಳವು ಶವ ಸಮೇತ ಮಾಯವಾಗಿ ಹೋಗಿ, ಮರದಕೊಂಬೆಯಲ್ಲಿ ನೇತಾಡ ತೊಡಗಿತು.



# ಕೇಡು ತಂದ ಅಭಿಮಾನ

**ರಾ**ಘವಯ್ಯನಿಗೆ ಏನೋ ಅಂಟುವ್ಯಾಧಿ. ಆತನನ್ನು ನೋಡಿಕೊಳ್ಳಲು ಚಿಕ್ಕ ಮಗಳು ಉಮೆ ಮಾತ್ರವೇ ಇದ್ದಳು. ದೊಡ್ಡ ಮಗಳು ಶಶಿರೇಖೆಗೆ ಮದುವೆಯಾಗಿ ಅತ್ತೆಯ ಮನೆಗೆ ಹೋಗಿದ್ದಳು.

ರಾಘವಯ್ಯ ಉಪಯೋಗಿಸಿದ ವಸ್ತುಗಳನ್ನು ಪ್ರತ್ಯೇಕವಾಗಿಡಬೇಕೆಂದು ವೈದ್ಯನು ಉಮೆಯನ್ನು ಎಚ್ಚರಿಸಿದ್ದನು. ಹಾಗೆಯೇ ಪಥ್ಯಕ್ರಮಗಳನ್ನೂ ತಿಳಿಸಿದ್ದನು, ಉಮೆ ವೈದ್ಯನು ಹೇಳಿದಂತೆಯೇ ಮಾಡುತ್ತಿದ್ದಳು.

ಆದರೆ ಅದು ರಾಘವಯ್ಯನಿಗೆ ಹಿಡಿಸಲಿಲ್ಲ. ತನ್ನಬಟ್ಟಲನ್ನೂ ಲೋಟಗಳನ್ನೂ ಪ್ರತ್ಯೇಕವಾಗಿಡುವುದನ್ನೂ, ತನಗೆ ಇಷ್ಟವಾದುದನ್ನು ತಿನ್ನಲು ಬಿಡದಿರುವುದನ್ನೂ ನೋಡಿ ಅವನು ಉಮೆಯ ಮೇಲೆ ಕೋಪಿಸುತ್ತಿದ್ದನು. ಆದರೆ ಉಮೆ ಅವನ ಇಷ್ಟದಂತೆ ನಡೆಯಲಿಲ್ಲ. ಆದುದರಿಂದ ರಾಘವಯ್ಯ ತನ್ನ ದೊಡ್ಡ ಮಗಳು ಶಶಿರೇಖೆಯನ್ನು ಕರೆಯಿಸಿದನು.

ಶಶಿರೇಖೆ ಬಂದು ತಂದೆಯ ಸ್ಥಿತಿಯನ್ನು ನೋಡಿ ಕನಿಕರಪಡುತ್ತ, ಅವನು ಉಪಯೋಗಿಸಿದ ವಸ್ತುಗಳನ್ನು ಬೇರೆ ಇಡಬೇಕಾಗಿಲ್ಲವೆಂದೂ, ಆತನಿಗೆ ಇಷ್ಟವಾದುದನ್ನು ತಿನ್ನಬಹುದೆಂದೂ ನಿರ್ಣಯಿಸಿದಳು. ಉಮೆಯ ಅಭಿಪ್ರಾಯ ನಡೆಯಲಿಲ್ಲ. ರಾಘವಯ್ಯ ಪರಮಾನಂದದಿಂದ ಉಮೆಯನ್ನು ಶಶಿರೇಖೆಯ ಅತ್ತೆಯ ಮನೆಯಲ್ಲಿ ಕೆಲಸಮಾಡಲು ಕಳುಹಿಸಿಕೊಟ್ಟನು.

ಆದರೆ ಶಶಿರೇಖೆ ಬಂದಂದಿನಿಂದ, ರಾಘವಯ್ಯನ ಆರೋಗ್ಯ ಕೆಡುತ್ತಾ ಹೋಯಿತು. ಅದುವರೆಗೆ ಗುಣಮುಖನಾಗಿ ಬರುತ್ತಿದ್ದವನ ರೋಗ ಮತ್ತೆ ಹೆಚ್ಚುವುದನ್ನು ನೋಡಿ ವೈದ್ಯನಿಗೆ ಗಾಬರಿಯಾಯಿತು. ರಾಘವಯ್ಯ ಅಪಥ್ಯ ಮಾಡುವನೇನೋ ಎಂದು ವಿಚಾರಿಸಿದಾಗ ಶಶಿರೇಖೆ ಹಾಗೇನಿಲ್ಲವೆಂದು ಸುಳ್ಳು ಹೇಳಿದಳು.

ಅಷ್ಟರಲ್ಲಿ ಶಶಿರೇಖೆಗೂ ಆ ರೋಗ ಸೋಂಕಿತು. ಅದನ್ನು ಕೇಳಿ, ಶಶಿರೇಖೆಯ ಗಂಡ ಉಮೆಯೊಂದಿಗೆ ಬಂದು ನಡೆದ ಸಮಾಚಾರ ತಿಳಿದು ಶಶಿರೇಖೆಯನ್ನು ಬೈದು, ಅವಳನ್ನೂ, ರಾಘವಯ್ಯನನ್ನೂ ವೈದ್ಯನ ಸಲಹೆಯಂತೆ ಎಚ್ಚರಿಕೆಯಿಂದ ಚಿಕಿತ್ಸೆ ಮಾಡಿಸಿದನು. ಉಮೆ ಅನುಸರಿಸಿದ ಪದ್ಧತಿಯಲ್ಲೇ ಇಬ್ಬರೂ ಕ್ರಮೇಣ ಗುಣಮುಖರಾದರು.





# ಮದಿರಾವತಿಯ ಕಥೆ

**ಪೂ**ರ್ವಕಾಲದಲ್ಲಿ ಉಜ್ಜಯಿನೀ ನಗರದೊಳಗೆ ಯಶಸ್ಕರನೆಂಬ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಆ ಬ್ರಾಹ್ಮಣನಿಗೆ ಶಶಿಭೂಷಣನೆಂಬ ಅತ್ಯಂತ ಸುಂದರನಾದ ಕುಮಾರನಿದ್ದನು. ಅವನು ಎಷ್ಟು ಸುಂದರನೋ ಅಷ್ಟೇ ಸುಗುಣಿ ಕೂಡಾ. ಅವನು ಗುರುವಿನ ಹತ್ತಿರ ವಿದ್ಯಾಭ್ಯಾಸಮಾಡಿಕೊಂಡಿರುವಾಗ, ವಿಜಯಸೇನನೆಂಬ ಕ್ಷತ್ರಿಯ ಬಾಲನೊಂದಿಗೆ ಸ್ನೇಹ ಉಂಟಾಯಿತು.

ಒಂದು ದಿನ ವಿಜಯಸೇನನೊಂದಿಗೆ ಅವನ ತಂಗಿ ಮದಿರಾವತಿ ಎಂಬ ಹುಡುಗಿ ಕೂಡಾ ಗುರುವಿನ ಬಳಿಗೆ ಬಂದು ವಿದ್ಯೆ ಕಲಿಯಲು ತೊಡಗಿದಳು. ಮದಿರಾವತಿ ಅಸಾಧಾರಣ ಸುಂದರಿಯಾಗಿದ್ದಳು. ಅವಳ ಕಂಠಸ್ವರವೂ ಮಾತೂ ಅತಿ ಮಧುರ. ಅವಳನ್ನು ನೋಡಿದ ಕ್ಷಣದಿಂದಲೂ ಶಶಿಭೂಷಣನಿಗೆ ಅವಳ ಮೇಲೆ ಅಪಾರವೆನಿಸುವಷ್ಟು ಪ್ರೇಮ ಉಂಟಾಯಿತು. ಶಶಿಭೂಷಣನ ಗುಣ ನಡತೆ ರೂಪಗಳು ಮದಿರಾವತಿಯ ಮನಸ್ಸಿನಲ್ಲಿಯೂ ಚೆನ್ನಾಗಿ ಪ್ರತಿಷ್ಠಿತವಾಯಿತು. ಮದಿರಾವತಿ ಮನೆಗೆ ಹೋಗಿ ತನ್ನ ತಾಯಿಯೊಂದಿಗೆ ಶಶಿಭೂಷಣನ ಗುಣಗಳನ್ನು ಕುರಿತು ತುಂಬಾ ಹೊಗಳಿ ಹೇಳ ತೊಡಗಿದಳು. ಶಶಿಭೂಷಣನನ್ನು ಒಂದುಸಾರಿ ಮನೆಗೆ ಕರೆದುಕೊಂಡು ಬರುವಂತೆ ತಾಯಿ ವಿಜಯಸೇನನೊಂದಿಗೆ ಹೇಳಿದಳು.

ಮರುದಿನ ವಿಜಯಸೇನನು ತನ್ನ ಸ್ನೇಹಿತನಾದ ಶಶಿಭೂಷಣನನ್ನು ಕರೆದುಕೊಂಡು ತನ್ನ ಮನೆಗೆ ಹೋದನು. ವಿಜಯಸೇನನು ತಂದೆಯೊಂದಿಗೆ ಏನೋ ಮಾತಾಡಿಕೊಂಡಿರುವಾಗ, ಧಾತ್ರೇಯಿ ಎಂಬ ಹುಡುಗಿಯೊಬ್ಬಳು ಬಂದಳು. ಅವಳು ಮದಿರಾವತಿಯ ಪ್ರಾಣ ಸ್ನೇಹಿತೆ. ಶಶಿಭೂಷಣನು ಒಬ್ಬನೇ ಇರುವುದನ್ನು ನೋಡಿ ಧಾತ್ರೇಯಿ ಒಂದು ಮಾಲತೀ ಪುಷ್ಪಮಾಲೆಯನ್ನು ಅವನಿಗೆ ಕೊಟ್ಟು ಗುಟ್ಟಾಗಿ, "ಇದನ್ನು ನನ್ನ ಗೆಳತಿ ಮದಿರಾವತಿ ನಿನಗಾಗಿ ಕಟ್ಟಿ ಕಳುಹಿಸಿದ್ದಾಳೆ. ತೆಗೆದುಕೋ" ಎಂದು ಉಸುರಿದಳು.

"ನಿನ್ನ ಸ್ನೇಹಿತೆಗೆ ಬೇಕಾದರೆ ನನ್ನ ಪ್ರಾಣವನ್ನಾದರೂ ಕೊಡುತ್ತೇನೆಂದು ಹೇಳು" ಎಂದು ಅವಳೊಂದಿಗೆ ಹೇಳಿದನು ಶಶಿಭೂಷಣ.

ಅಂದಿನಿಂದ ಶಶಿಭೂಷಣನೂ ಮದಿರಾವತಿಯೂ ಆಗಾಗ ಸಂಧಿಸಿ ಮನ ಬಿಚ್ಚಿ ಮಾತಾಡ ತೊಡಗಿದರು.



ದಿನದಿಂದ ದಿನಕ್ಕೆ ಅವರೊಳಗಿನ ಪ್ರೇಮವು ಅವರು ಬೆಳೆಯುತ್ತಾ ಬಂದಂತೆ ಬೆಳೆಯುತ್ತಾ ಹೋಯಿತು.

ಹೀಗಿರುವಾಗ ಒಂದು ದಿನ ಒಬ್ಬ ಕ್ಷತ್ರಿಯ ಕುಮಾರನು ಬಂದು ಮದಿರಾವತಿಯನ್ನು ತನಗೆ ಕೊಟ್ಟು ವಿವಾಹಮಾಡಬೇಕೆಂದು ಅವಳ ತಂದೆಯೊಂದಿಗೆ ಕೇಳಿದನು. ತನ್ನ ಮಗಳು ಮತ್ತೊಬ್ಬನ ಮೇಲೆ ಆಗಲೇ ಪ್ರೇಮದಲ್ಲಿ ತೇಲುತ್ತಿರುವ ವಿಷಯ ತಿಳಿಯದೆ, ತಂದೆ ಅದಕ್ಕೆ ಅಂಗೀಕಾರವಿತ್ತನು. ಲಗ್ನದ ಮುಹೂರ್ತ ದಿನ ಕೂಡಾ ನಿಶ್ಚಯವಾಗಿ ಹೋಯಿತು.

ಮದಿರಾವತಿಗೆ ಮದುವೆ ನಿಶ್ಚಯವಾದ ಕ್ಷಣದಿಂದಲೂ ಶಶಿಭೂಷಣನಿಗೆ ದಾರುಣವಾದ ಮನೋವ್ಯಾಧಿ ಹಿಡಿಯಿತು. ಕಡೇಪಕ್ಷ ಒಂದುಸಾರಿ ಮದಿರಾವತಿಯನ್ನು ಕಣ್ಣು ತುಂಬಾ ನೋಡಿ, ತನ್ನ ಮನೋವೇದನೆಯನ್ನು ಉಪಶಾಂತಿ ಮಾಡಿಕೊಳ್ಳಲಿಕ್ಕೂ ಅವನಿಗಾಗಲಿಲ್ಲ. ಮದುವೆ ಗೊತ್ತಾದಂದಿನಿಂದ ಅವಳು ಅಂತಃಪುರದಲ್ಲೇ ಕಟ್ಟು ಬೀಳಾಗಿದ್ದಳು.

ಮದುವೆಯ ದಿನ ಬಂತು. ಮದಿರಾವತಿಗೆ ಮಂಗಳಸ್ನಾನಮಾಡಿಸಿ, ಅಲಂಕರಿಸಿ ಮದುಮಗಳನ್ನಾಗಿ ಮಾಡಿದರು. ಕಾಲಕ್ಕೆ ಸರಿಯಾಗಿ ಮಂಗಳವಾದ್ಯ ವೈಭವಗಳಿಂದ ಮದುಮಗನ ಆಗಮನವೂ ಆಗಿ, ಎಲ್ಲರೂ ಗಂಡಿನ ಕಡೆಯವರ ಬಿಡದಿಯಲ್ಲಿ ಇಳಿದುಕೊಂಡರು.

ಯಾವ ವಿಧದಿಂದಾದರೂ ಮದಿರಾವತಿಯ ಮದುವೆ ನಿಂತು ಹೋಗುವುದೇನೋ ಎಂಬ ಆಶಾತಂತು ಅಷ್ಟರವರೆಗೂ ಶಶಿಭೂಷಣನ ಮನಸ್ಸಿನಲ್ಲಿತ್ತು. ಅದೀಗ ಪೂರ್ತಿ ಸತ್ತುಹೋಯಿತು. ಶಶಿಭೂಷಣನು ಆ ನೋವು ತಾಳಿಕೊಳ್ಳಲಾಗದೆ ಆತ್ಮಹತ್ಯಮಾಡಿಕೊಳ್ಳುವುದೇ ಒಳ್ಳೆಯದೆಂದುಕೊಂಡನು. ವಿವಾಹದ ಹಸೆ ಮಣೆಯಲ್ಲಿ ಮದುಮಗಳು ಕುಳಿತುಕೊಳ್ಳುವುದಕ್ಕೆ ಮೊದಲು ಮದಿರಾವತಿ ಜತೆ ಕನ್ಯೆಯರೊಂದಿಗೆ ಊರಿನ ಮೇರೆಯಲ್ಲಿದ್ದ ಅಮ್ಮನವರ ಗುಡಿಗೆ ಹೋಗಿ, ಅಲ್ಲಿಯ ದೇವಿಗೆ ಪೂಜೆ ಮಾಡಬೇಕೆಂಬ ಪದ್ಧತಿ ಇದ್ದಿತು. ಆ ಗುಡಿಗೆ ಸಮೀಪವಾಗಿ ದಾರಿಯಲ್ಲಿ ಒಂದು ಆಲದ ಮರವಿದ್ದಿತು. ಆ ಮರದ ಕೊಂಬೆಗೆ ನೇಣು ಹಾಕಿಕೊಂಡರೆ ಮದಿರಾವತಿಯ ಕಣ್ಣಿಗೆ ಕೊನೇಪಕ್ಷ ತನ್ನ ಶವವಾದರೂ ಬೀಳಬಹುದೆಂದೂ, ತನ್ನ ಗತಿ ಅವಳಿಗೆ ಗೊತ್ತಾಗಿ, ಬರುವ ಜನ್ಮದಲ್ಲಾದರೂ ತನ್ನನ್ನು ನೆನೆದಾಳೆಂದೂ, ಅವಳೊಂದಿಗೆ ಮದುವೆಯಾಗಬಹುದೆಂದೂ ತೋರಿ, ಶಶಿಭೂಷಣನು ಅಲ್ಲಿಗೆ ಹೊರಟನು.

ಇಷ್ಟರೊಳಗೆ ಮದಿರಾವತಿಯ ಸ್ನೇಹಿತೆಯಾದ ಧಾತ್ರೇಯಿ ಆ ದಿನ ಬೆಳಗ್ಗೆಯೇ ಶಂಖಹ್ರದವೆಂಬ ಸರೋವರಕ್ಕೆ ಸ್ನಾನಮಾಡಲು ಹೋದಳು. ಆ ಸರೋವರದ ತೀರದಲ್ಲಿ ಅವಳು ಹೂಗಳನ್ನು ಕೊಯ್ಯುತ್ತಿದ್ದಾಗ ಸೋಮದತ್ತನೆಂಬ ಬ್ರಾಹ್ಮಣ ಯುವಕನೊಬ್ಬನು ಅಲ್ಲಿಗೆ ಬಂದನು. ಆ ಬ್ರಾಹ್ಮಣ ಯುವಕನು ಹೂ ಕೊಯ್ಯುವ ತನ್ನನ್ನೇ ರೆಪ್ಪೆ

ಬಡೆಯದೆ ನೋಡುವುದನ್ನು ನೋಡಿ ಧಾತ್ರೇಯಿಗೆ ಮೈ ಜುಮ್ಮುಗುಟ್ಟಿ ನಾಚಿಕೆಯಾಯಿತು.

ಆ ಸಮಯದಲ್ಲಿ ದೂರದಿಂದ ಏನೋ ಗಲಾಟೆ ಎದ್ದಿತು. ಏನೋ ಹಾಹಾಕಾರ! ಮದ್ದಾನೆಯೊಂದು ಸಂಕಲೆ ಹರಿದುಕೊಂಡು, ಈ ಸರೋವರದ ಕಡೆಗೇ ವಾಯುವೇಗದಿಂದ ಓಡಿಬರುತ್ತಿತ್ತು. ಏನು ಮಾಡುವುದೆಂದು ಧಾತ್ರೇಯಿ ಆಲೋಚಿಸುವುದರೊಳಗೆ ಪರದೇಶಿಯಾದ ಆ ಸೋಮದತ್ತನು ಅವಳನ್ನು ತನ್ನ ಎರಡು ಕೈಗಳಿಂದಲೂ ಎತ್ತಿಕೊಂಡು ಹೋಗಿ ದೂರದಲ್ಲಿದ್ದ ಜನಸಮ್ಮರ್ದದ ಹತ್ತಿರ ಅವಳನ್ನು ಸೇರಿಸಿಬಿಟ್ಟನು.

ಇಷ್ಟೊಂದು ಧೈರ್ಯ ಸಾಹಸಗಳಿಂದ ತನ್ನನ್ನು ಕಾಪಾಡಿದ ಆ ಯುವಕನ ಪೂರ್ವೋತ್ತರಗಳನ್ನು ತಿಳಿದುಕೊಳ್ಳಬೇಕೆಂದು ಧಾತ್ರೇಯಿ ಆಲೋಚನೆ ಮಾಡುವುದರೊಳಗೇ, ಆ ಮದ ಓಡಿದ ಆನೆ ಆ ಜನರ ಗುಂಪಿನ ಕಡೆಗೇ ಬಂದಿತು. ಜನರು ಕುಯ್ಯೊ ಮುರ್ಯೋ ಎನ್ನುತ್ತ ಚೆಲ್ಲಾಪಿಲ್ಲಿಯಾಗಿ ಓಡಿದರು. ಸೋಮದತ್ತನು ಕೂಡಾ ಎತ್ತೋ ಓಡಿದನು. ಆ ಮೇಲೆ ಅವನು ಧಾತ್ರೇಯಿಯ ಸಮಾಚಾರವನ್ನು ತಿಳಿದುಕೊಳ್ಳಬೇಕೆಂದು ಅವಳನ್ನು ಬಿಟ್ಟ ಜಾಗೆಗೆ ಪುನಃ ಬಂದನು. ಅಲ್ಲಿ ಅವಳಿರಲಿಲ್ಲ. ಅವಳು ತನ್ನ ಪ್ರಿಯ ಸಖಿಯಾದ ಮದಿರಾವತಿಯ ಲಗ್ನ ಮುಹೂರ್ತವು ಸಮೀಪಿಸುವುದನ್ನು ನೋಡಿ, ಸೋಮದತ್ತನ ವಿಚಾರವನ್ನು ಸದ್ಯಕ್ಕೆ ಬಿಟ್ಟು ಅಲ್ಲಿಂದ ಹೊರಟು ಹೋಗಿಬಿಟ್ಟಿದ್ದಳು.

ತಾನು ಕಾಪಾಡಿದ ಹುಡುಗಿ ಯಾರೋ, ಅವಳ ಹೆಸರೇನೋ ಸೋಮದತ್ತನಿಗೆ ಗೊತ್ತಾಗಲಿಲ್ಲ. ಅವಳು ಕಣ್ಣಿಗೆ ಬೀಳುವವರೆಗೂ ವಿಶ್ರಮಿಸಬಾರದೆಂದು ನಿಶ್ಚಯಿಸಿಕೊಂಡು, ಅವನು ಮನಸ್ಸು ಬಂದ ಕಡೆಗೆ ನಡೆಯ ತೊಡಗಿದನು. ಆ ವಿಧವಾಗಿ ನಡೆಯುತ್ತ ಸಾಯಂಕಾಲದ ಹೊತ್ತಿಗೆ ಅಮ್ಮನವರ ಗುಡಿಯ ಪ್ರಾಂತಕ್ಕೆ ಬಂದನು. ಆಗ ದಾರಿಯ ಬದಿಯ ಆಲದ ಮರದ ಕೊಂಬೆಯಲ್ಲಿ ಒಬ್ಬ ಮನುಷ್ಯನು ನೇತಾಡುವುದನ್ನು ನೋಡಿ ಅಲ್ಲಿಗೆ





ಓಡಿದನು. ಆ ಮನುಷ್ಯ ಕೈಕಾಲು ಹೊಡೆದು ಕೊಳ್ಳುವುದನ್ನು ನೋಡಿ, ಬೇಗ ಬೇಗನೇ ಮರದ ಕೊಂಬೆಯಿಂದ ಅವನನ್ನು ಕೆಳಗಿಳಿಸಿ ಉಪಚರಿಸ ತೊಡಗಿದನು.

ಅವನಿಂದಾಗಿ ಸಾಯಲಾರದೆ ಬದುಕಿದ ಶಶಿಭೂಷಣನು ಎದ್ದು ಕುಳಿತು ಸೋಮದತ್ತನನ್ನು ನೋಡಿ, "ಸಾಯುವವನನ್ನು ಉಳಿಸಿದ ದಯಾಮಯನಾದ ನೀನು ಯಾರೋ? ನನ್ನನ್ನು ಏತಕ್ಕಾಗಿ ಬದುಕಿಸಿದೆಯೋ? ನನ್ನ ಜೀವಿತವೇ ಅಂಧಕಾರವಾದ್ದರಿಂದ ತಾನೇ ಸಾಯಲು ನೋಡಿದೆ?" ಎಂದು ತನ್ನ ಕಥೆಯನ್ನೆಲ್ಲಾ ಹೇಳಿದನು.

ಅದನ್ನು ಕೇಳಿ ಸೋಮದತ್ತನು, "ಹುಚ್ಚನೇ! ಪುರುಷನಾದವನು ಮಾಡುವ ಕೆಲಸವೋ ಇದು? ನಾನೂ ನಿನ್ನ ಹಾಗೆಯೇ ಒಬ್ಬಳು ಕನ್ಯೆಯನ್ನು ಪ್ರೇಮಿಸಿದ್ದೇನೆ ಗೊತ್ತಾ? ಅವಳು ಯಾರು ಏನು ಎಂಬುದೊಂದೂ ಗೊತ್ತಿಲ್ಲದೆ ಹುಡುಕಿಕೊಂಡು ಅಲೆಯುತ್ತಿದ್ದೇನೆ" ಎಂದು ತನ್ನ ಕಥೆಯನ್ನು ಶಶಿಭೂಷಣನೊಂದಿಗೆ ಹೇಳಿದನು.

ಅವರಿಬ್ಬರೂ ಹೀಗೆ ಮಾತಾಡಿಕೊಳ್ಳುತ್ತಿದ್ದಾಗಲೇ ದೂರದಲ್ಲಿ ಮಂಗಳವಾದ್ಯ ಧ್ವನಿಗಳು ಕೇಳಿಬರತೊಡಗಿತು.

"ಅಕೋಕೋ! ಮದಿರಾದೇವಿ ಇಲ್ಲಿಗೆ ಬರುತ್ತಿದ್ದಾಳೆ! ಮದುಮಗಳಾಗಿ ಅಮ್ಮನವರನ್ನು ಪೂಜಿಸಲು ಬರುತ್ತಿದ್ದಾಳೆ" ಎಂದನು ಶಶಿಭೂಷಣ.

"ಹಾಗಾದರೆ ನಾವು ಹೋಗಿ ಅಮ್ಮನವರ ಗುಡಿ ಹೊಕ್ಕು ವಿಗ್ರಹದ ಹಿಂದೆ ಅಡಗಿಕೊಳ್ಳೋಣ" ಎಂದನು ಸೋಮದತ್ತ.

ಇಬ್ಬರೂ ಬೇಗ ಬೇಗನೆ ಗುಡಿಯೊಳಗೆ ಹೊಕ್ಕು ವಿಗ್ರಹದ ಹಿಂದೆ ಕತ್ತಲೆಯಲ್ಲಿ ಮರೆಯಾದರು. ಮದಿರಾವತಿ ತನ್ನ ಸಖಿಯರೊಂದಿಗೆ ಗುಡಿಯೊಳಗೆ ಹೊಕ್ಕಳು. ಸಖಿಯರು ಗರ್ಭ ಗುಡಿಯಲ್ಲಿ ದೀಪ ಹಚ್ಚಿ ಹೊರಗೆ ಬಂದ ಮೇಲೆ, ಮದುಮಗಳು ಒಬ್ಬಂಟಿಗಳಾಗಿ ಅಮ್ಮನವರನ್ನು ಪ್ರಾರ್ಥಿಸಿ ಪೂಜೆ ಮಾಡಬೇಕೆಂಬುದು ಕ್ರಮ. ಆದರಂತೆ ಮದಿರಾದೇವಿ ಗುಡಿಯೊಳಗೆ ಬಂದು ಬಾಗಿಲು ಮುಚ್ಚಿ ತಾಳಹಾಕಿಕೊಂಡಳು. ಉಳಿದವರೆಲ್ಲ ಹೊರಗೇ ನಿಂತರು.

ಮದಿರಾದೇವಿ ದೇವಿಯ ವಿಗ್ರಹಕ್ಕೆ ನಮಸ್ಕಾರ ಮಾಡುತ್ತ, "ಓ ಮಹಾತಾಯೇ! ನಾನು ಒಬ್ಬನನ್ನು ಪ್ರೇಮಿಸಿದರೆ ಇನ್ನೊಬ್ಬನೊಂದಿಗೆ ನನ್ನ ಮದುವೆ ಮಾಡಿಸುವೆಯಲ್ಲಾ? ಇದೆಲ್ಲಿಯ ನ್ಯಾಯವಮ್ಮಾ? ಹೋಗಲಿ, ನನ್ನ ಹಣೆಯಲ್ಲಿ ಹಾಗೇ ಬರೆದಿದ್ದರೆ ಬೇಗದಲ್ಲಿ ಮತ್ತೊಂದು ಜನ್ಮವೆತ್ತಿ ಆತನನ್ನೇ ವರಿಸುವ ಹಾಗೆ ಮಾಡು ತಾಯೇ!" ಎಂದು ಪ್ರಾರ್ಥಿಸಿ ತನ್ನ ಸೆರಗಿನ ವಸ್ತ್ರವನ್ನು ತೆಗೆದು ಕಂಠಕ್ಕೆ ಉರುಳು ಹಾಕಿಕೊಳ್ಳ ತೊಡಗಿದಳು.

ಅದನ್ನು ನೋಡಿ ಶಶಿಭೂಷಣನು ವಿಗ್ರಹದ ಹಿಂದಿನಿಂದ ಓಡಿ ಬಂದು ಅವಳನ್ನು ತಡೆದನು. ಅವನ

ಹಿಂದೆಯೇ ಸೋಮದತ್ತನೂ ಈಚೆಗೆ ಬಂದು ನಿಂತನು. ಮದಿರಾವತಿಗಾದ ಆಶ್ಚರ್ಯಕ್ಕೆ ಮೇರೆಯಿಲ್ಲ.

"ಹೆಚ್ಚು ಮಾತಿಗೆ ವ್ಯವಧಿಯಿಲ್ಲ. ಮಸಕು ಕತ್ತಲೆಯಾದ ಒಳ್ಳೇ ಸಮಯವಿದು. ನಿನ್ನ ಪ್ರಿಯಳಿಗೆ ನನ್ನ ದುಸ್ತುಗಳನ್ನು ಉಡಿಸಿ ಅವಳನ್ನು ಕರೆದು ಕೊಂಡು ಗ್ರಾಮಾಂತರಗಳಿಗೆ ಹೋಗಿಬಿಡು. ಇಷ್ಟ ರೊಳಗೆ ನಾನು ಇವಳ ಸೀರೆ ರವಕೆಗಳನ್ನೂ ಆಭರಣ ಗಳನ್ನೂ ಧರಿಸಿ ಮದುಮಗಳ ವೇಷದಲ್ಲಿ ಹೊರಗೆ ಹೋಗುತ್ತೇನೆ" ಎಂದನು ಸೋದುದತ್ತ.

ಸೋಮದತ್ತನು ಮದಿರಾವತಿಯ ಹಾಗೆಯೇ ಅವಳ ಮದುಮಗಳ ವೇಷವನ್ನು ಹಾಕಿಕೊಂಡು, ಮುಖಕ್ಕೆ ಸೆರಗಿನ ಮುಸುಕನ್ನು ಎಳೆದುಕೊಂಡು, ಬಾಗಿಲು ತೆರೆದು ಹೊರಗೆ ಹೋದನು. ಗೆಳತಿಯರು ಮದಿರಾವತಿಯೇ ಪೂಜೆ ಪ್ರಾರ್ಥನೆ ಮುಗಿಸಿ ಹಿಂದಿರುಗಿದಳೆಂದುಕೊಂಡು, ಮದುವೆಯ ಹಾಡು ಹಾಡುತ್ತಾ ಮೇಳ ತಾಳಗಳೊಂದಿಗೆ ಮದುವೆ ಮನೆಗೆ ಮದುಮಗಳನ್ನು ಕರೆದುಕೊಂಡು ಹೊರಟರು.

ಅವರು ಹೋದ ಸ್ವಲ್ಪ ಹೊತ್ತಿಗೆ ಶಶಿಭೂಷಣನೂ, ಪುರುಷ ವೇಷದಲ್ಲಿದ್ದ ಮದಿರಾವತಿಯೂ ಕಾಡಿನದಾರಿ ಹಿಡಿದು ಬೆಳತನಕ ನಡೆದು ಕಡೆಗೆ ಅಚರಪುರವೆಂಬ ಊರನ್ನು ತಲಪಿದರು. ಅಲ್ಲಿ ಒಬ್ಬ ಬ್ರಾಹ್ಮಣನು ಅವರಿಗೆ ತನ್ನ ಮನೆಯಲ್ಲಿ ಆಶ್ರಯವಿತ್ತನು. ಅಲ್ಲಿಯೇ ಒಂದು ಸುಮೂರ್ತದಲ್ಲಿ, ಅವರಿಬ್ಬರೂ ಅಲ್ಲಿಯ ಒಂದು ದೇವಾಲಯಕ್ಕೆ ಹೋಗಿ ಶಾಸ್ತ್ರೋಕ್ತವಾಗಿ ವಿವಾಹ ಮಾಡಿಕೊಂಡರು.

ಇತ್ತ ಮದಿರಾವತಿಯ ವೇಷದಲ್ಲಿರುವ ಸೋಮ ದತ್ತನು ಮದುವೆಯ ಮನೆಗೆ ಬಂದು ಸೇರಿದಾಗ, ಧಾತ್ರೇಯಿ ಶಂಖ ಹ್ರದದಿಂದ ತಿರುಗಿ ಬಂದಳು. ತನಗೆ ಉಂಟಾದ ಅನುಭವಗಳನ್ನು ತನ್ನ ಪ್ರಿಯ ಸಖಿಯಾದ ಮದಿರಾವತಿಯೊಂದಿಗೆ ಹೇಳಿ ಕೊಳ್ಳ ಲಿಕ್ಕೂ ಅವಳಿಗೆ ಹೆಚ್ಚಿನ ವ್ಯವಧಿ ಇರಲಿಲ್ಲ, ಆದುದರಿಂದ ಧಾತ್ರೇಯಿ ಮದಿರಾವತಿಯ ತೋಳು ಹಿಡಿದು, "ಸಖೀ! ನಿನ್ನ ಹತ್ತಿರ ನನ್ನದೊಂದು ಅದ್ಭುತ ರಹಸ್ಯವನ್ನು ಚಿಟುಕಾಗಿ ಹೇಳಿ ಬಿಡುತ್ತೇನೆ



ಹೀಗೆ ಬಾ" ಎಂದು ಅವನನ್ನು ಏಕಾಂತವಾದೊಂದು ಕೋಣೆಗೆ ಕರೆದುಕೊಂಡು ಹೋದಳು.

ಅಷ್ಟರೊಳಗೆ ಮುಖದ ಮುಸುಗಿನೊಳಗಿನಿಂದ ಧಾತ್ರೇಯಿಯನ್ನು ನೋಡಿದ ಸೋಮದತ್ತನು, "ನಾನೇನಾದರೂ ಕನಸು ಕಾಣುತ್ತಿರುವೆನೆ? ಅಥವಾ ನನ್ನ ಭ್ರಮೆಯಲ್ಲುಂಟಾದ ಮಾಯಾದೃಶ್ಯವೇ? ಇಲ್ಲಾ ದೇವರ ಅನುಗ್ರಹವೇ?" ಎಂದು ತನ್ನೊಳಗೆ ತಾನು ಆಶ್ಚರ್ಯಪಡ ತೊಡಗಿದನು.

"ಸಖೀ! ಮದಿರಾ! ನಿನಗೆ ಪ್ರಿಯನಲ್ಲದವನೇ ಗಂಡನಾಗಲಿದ್ದಾನೆ. ನಿನ್ನ ಸಂಕಟ ನನಗೆ ಗೊತ್ತಾಗುತ್ತದೆ. ನಿನಗೆ ಈ ನೋವನ್ನು ಸಹಿಸಲಾಗದಿರುವಾಗ ನನ್ನ ಸಂಗತಿಯನ್ನು ನೆನೆಸಿಕೋ. ಏಕೆಂದರೆ ನಾನು ಕೂಡಾ ನಿನ್ನ ಹಾಗಯೇ ಅಭಾಗ್ಯವತಿ! ನಿನ್ನ ಹಾಗೆಯೇ ನಾನೂ ಒಬ್ಬ ಯುವಕನನ್ನು ಪ್ರೇಮಿಸಿ ಬಿಟ್ಟೆ. ಅವನಾರೋ, ಹೆಸರೇನೋ, ಎಲ್ಲಿದ್ದಾನೋ ಎಂಬುದೊಂದೂ ನನಗೆ ಗೊತ್ತಿಲ್ಲದ ಹಾಗಾಯಿತು. ನಿನ್ನ ಪ್ರಿಯನನ್ನು ನೀನು ಇನ್ನೊಮ್ಮೆ ನೋಡಲು ಸಾಧ್ಯವಿದೆ. ನನಗೆ ಅಂತಹ ಆಶೆ ಕೂಡಾ ಇಲ್ಲ" ಎಂದು ಧಾತ್ರೇಯಿ ತನ್ನ ಕಥೆಯನ್ನು ಹೇಳಿದಳು.

ಇದನ್ನು ಕೇಳುತ್ತಾ ಇದ್ದ ಸೋಮದತ್ತನು ಪರಮಾನಂದದಿಂದ ತೇಲುತ್ತ, ಅವಳು ಮಾತು ಮುಗಿಸುವ ಮೊದಲೇ ತನ್ನ ಮೇಲು ಮುಸುಗನ್ನು ತೊಲಗಿಸಿ ತನ್ನ ಮುಖವನ್ನು ತೋರಿಸಿದನು. ಧಾತ್ರೇಯಿಗಾದ ಆಶ್ಚರ್ಯಕ್ಕೂ ಆನಂದಕ್ಕೂ ಮೇರೆಯಿರಲಿಲ್ಲ. ಸೋಮದತ್ತನು ನಡೆದ ಸಂಗತಿಯನ್ನೆಲ್ಲಾ ವಿವರಿಸಿ ಹೇಳಿ, ಮದಿರಾವತಿ ಸಶಿಭೂಷಣನೊಂದಿಗೆ ತಪ್ಪಿಸಿಕೊಂಡು ಹೋದಳೆಂದು ಹೇಳುವವರೆಗೂ ಧಾತ್ರೇಯಿ ತನ್ನ ಕಣ್ಣುಗಳನ್ನೂ, ಕಿವಿಗಳನ್ನೂ ನಂಬಲಾರದೆ ಹೋದಳು.

"ನಾವು ಹೀಗೆ ಮಾತಾಡುತ್ತ ಹೊತ್ತು ಕಳೆದರೆ ಪ್ರಯೋಜನವಿಲ್ಲ. ಬೇಗನೇ ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗದಿದ್ದರೆ ನಮ್ಮ ಗುಟ್ಟೆಲ್ಲಾ ಹೊರಬಿದ್ದು ಕೆಲಸ ಕೆಡುತ್ತದೆ. ಇಲ್ಲಿಂದ ಪಾರಾಗುವ ಉಪಾಯ ಹೇಳು ಬೇಗ!" ಎಂದನು ಸೋಮದತ್ತ.

ಧಾತ್ರೇಯಿ ತನ್ನ ನಗಗಳನ್ನೆಲ್ಲಾ ಮೂಟೆ ಕಟ್ಟಿಕೊಂಡು, ಸೋಮದತ್ತನನ್ನು ಕರೆದುಕೊಂಡು, ಹಿಂದಿನ ಕಿರುಬಾಗಿಲಿನ ಮೂಲಕ ಹೊರಬಿದ್ದು, ತೋಟದೊಳಗಿನಿಂದಾಗಿ ಆ ವಠಾರದಿಂದ ಪಾರಾಗಿ ಊರ ಹೊರಗೆ ಹೋದಳು. ಅಲ್ಲಿಂದ ಹೊರಟು ಕೆಲವುದಿನ ಪ್ರಯಾಣಮಾಡಿ, ಒಂದು ಅಗ್ರಹಾರವನ್ನು ಸೇರಿ, ಅಲ್ಲಿ ಸುಮುಹೂರ್ತದಲ್ಲಿ ಮದುವೆ ಮಾಡಿಕೊಂಡರು. ತಮ್ಮ ನಿವಾಸವನ್ನೂ ಅಲ್ಲಿಯೇ ಏರ್ಪಡಿಸಿಕೊಂಡರು.






# ಪರಶುರಾಮ

೧

ಹೈಹಯ ವಂಶದವನಾದ ಕಾರ್ತವೀರ್ಯಾರ್ಜುನ ನೆಂಬ ರಾಜನು ತುಂಬ ಹೆಸರುವಾಸಿಯಾದವನು. ಅವನ ತಂದೆಯು ಹೆಸರು ಕೃತವೀರ್ಯನಾದುದರಿಂದ ಮಗನಿಗೆ ಕಾರ್ತವೀರ್ಯನೆಂಬ ಹೆಸರಾಯಿತು. ಅರ್ಜುನನೆಂಬುದು ಅವನ ನಿಜವಾದ ಹೆಸರು.

ಕಾರ್ತವೀರ್ಯಾರ್ಜುನನ ಕುಮಾರರು ಬಹಳ ದುಷ್ಟರಾಗಿದ್ದರು. ಅವರು ಒಮ್ಮೆ ಅಡವಿಯಲ್ಲಿ ಜಮದಗ್ನಿಯ ಆಶ್ರಮಕ್ಕೆ ಹೋದರು. ಆಶ್ರಮದಲ್ಲಿ ಜಮದಗ್ನಿಯೂ, ಅವನ ಕುಮಾರರೂ ಇರಲಿಲ್ಲ. ಜಮದಗ್ನಿಯ ಹೋಮಧೇನು ಮಾತ್ರ ಕರುವಿನೊಂದಿ ಗಿದ್ದಿತು. ಕಾರ್ತವೀರ್ಯನ ಕುಮಾರರು ಆ ಹೋಮ ಧೇನುವನ್ನು ಕರುವಿನೊಂದಿಗೆ ಎಳೆದುಕೊಂಡು ಹೋಗಲು ಪ್ರಯತ್ನಿಸಿದರು. ಎಷ್ಟೇ ಪ್ರಯತ್ನಿಸಿ ದರೂ ಆ ಧೇನು ಕರುಗಳು ಅವರ ಕೈಗೆ ಸಿಕ್ಕಲಿಲ್ಲ.

ತರುವಾಯ ಕಾರ್ತವೀರ್ಯನು ಸ್ವತಃ ಜಮ ದಗ್ನಿಯ ಆಶ್ರಮಕ್ಕೆ ಬಂದು, ಅತಿಥಿ ಸತ್ಕಾರಗಳ ನ್ನೆಲ್ಲಾ ಚೆಂದಾಗಿ ಸ್ವೀಕರಿಸಿ, ಜಮದಗ್ನಿಯ ಹತ್ತಿರ ಇರುವ, ಧೇನು ಕೇಳಿದುದನ್ನು ಕೊಡುವಂತಹ ಕಾಮ ಧೇನುವೇ ಎಂದು ದೃಢಪಡಿಸಿಕೊಂಡನು. ಆಮೇಲೆ ಆ ಗೋವನ್ನು ತನಗೆ ಕೊಟ್ಟುಬಿಡುವಂತೆ ಜಮದಗ್ನಿ ಯನ್ನು ಕೇಳಿದನು. ಜಮದಗ್ನಿ ಖಂಡಿತವಾಗಿ ನಿರಾಕ ರಿಸುವುದನ್ನು ಸಹಿಸದೆ ಅವನನ್ನು ಕಡಿದುಕೊಂದು, ಗೋವನ್ನು ಎಳೆದೊಯ್ಯಲು ನೋಡಿದನು. ಅವನಿಗೂ ಆ ಗೋವನ್ನು ಒಯ್ಯಲು ಸಾಧ್ಯವಾಗಲಿಲ್ಲ.

ಆ ಸಮಯದಲ್ಲಿ ಪರಶುರಾಮನು ಆಶ್ರಮದಲ್ಲಿರ ಲಿಲ್ಲ. ಇದ್ದಕ್ಕಿದ್ದ ಹಾಗೆ ಅವನಿಗೆ ಎದೆಯ ಮೇಲೆ ಕಲ್ಲಿನ ಭಾರಬಿದ್ದ ಹಾಗೆ ತೋರಿತು. ಮನಸ್ಸಿಗೇನೋ ವ್ಯಾಕುಲವೆನಿಸಿತು. ಏನೋ ಕೇಡು ಬಂದಿರಬೇಕೆಂದು ಶಂಕೆಯುಂಟಾಯಿತು. ಅವನಿಗರಿಯದಂತೆಯೇ ಕಾಲು ಗಳು ಬೇಗಬೇಗನೆ ಆಶ್ರಮದ ಕಡೆಗೇ ನಡೆದುವು. ಆಶ್ರಮವು ಸಮೀಪಿಸಿದಂತೆ ತಾಯಿಯ ಕಂಠದಿಂದ ಹೊರಡುವ ಕೆಟ್ಟ ರೋದನ ಧ್ವನಿ! ಪರಶುರಾಮ ನನ್ನು ನೋಡಿ ರೇಣುಕೆ ಕಾರ್ತವೀರ್ಯಾರ್ಜುನನ ಕ್ರೌರ್ಯವನ್ನು ಹೇಳುತ್ತ ಇಪ್ಪತ್ತೊಂದು ಸಾರಿ ಎದೆಯನ್ನು ಹೊಡೆದುಕೊಂಡು ಶೋಕಿಸಿದಳು. ಪರಶುರಾಮನು ತಾಯಿಯನ್ನು ಸಮಾಧಾನ

ಪಡಿಸಿ, ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಸಂಹಾರ ಮಾಡುವೆನೆಂದು ಶಪಥ ಹೂಡಿದನು. ತನ್ನ ತಂದೆಯ ಶವವನ್ನು ದಹನಮಾಡುವ ಪ್ರಯತ್ನಕ್ಕೆ ತೊಡಗಿದನು. ಅಷ್ಟರೊಳಗೆ ಭೃಗು ಮಹರ್ಷಿ ಅಲ್ಲಿಗೆ ಬಂದು, ಜಮದಗ್ನಿಯ ಮೇಲೆ ಮಂತ್ರ ಜಲವನ್ನು ಸಿಂಪಡಿಸಿದನು. ಕೂಡಲೇ ಜಮದಗ್ನಿ ಬದುಕಿ ಎದ್ದನು.

ಪರಶುರಾಮನು ಮತ್ತೆ ಬದುಕಿದ ತಂದೆಗೆ ಉಪಚಾರಗಳನ್ನು ಮಾಡಿ, ತಾನು ಕ್ಷತ್ರಿಯ ದೌಷ್ಟ್ಯಕ್ಕೆ ಪ್ರತೀಕಾರವಾಗಿ ಇಪ್ಪತ್ತೊಂದು ಸಾರಿ ಪ್ರಪಂಚ ಸುತ್ತಿ ಕ್ಷತ್ರಿಯರನ್ನು ಕೊಲ್ಲುವ ಪ್ರತಿಜ್ಞೆ ಮಾಡಿರುವುದನ್ನು ತಂದೆಗೆ ತಿಳಿಸಿದನು.

ಜಮದಗ್ನಿ ಪರಶುರಾಮನ ಕೋಪವನ್ನು ತಣಿಸಲು ಪ್ರಯತ್ನ ಮಾಡಿದನು. ಆದರೆ ಉದಾಸೀನವಾಗಿದ್ದರೆ ತಪ್ಪು ಮಾಡಿದವರನ್ನು ಪ್ರೋತ್ಸಾಹಿಸಿದಂತಾಗುವುದೆಂದೂ, ಕಾರಣವಿಲ್ಲದೆ ನಿರಾಯಾಸವಾಗಿ ಕೊಲೆ ಮಾಡುವವರನ್ನು ಸುಮ್ಮನೆ ಬಿಡುವುದು ಸರಿಯಲ್ಲವೆಂದೂ ಪರಶುರಾಮನು ವಾದಿಸಿದನು :

ತನ್ನ ಮಗನ ಹಟವನ್ನು ಶಾಂತ ಮಾಡುವುದು ತನ್ನಿಂದಾಗದೆಂದರಿತ ಜಮದಗ್ನಿ, " ಮೊದಲು ನೀನು ಬ್ರಹ್ಮನ ಬಳಿಗೆ ಹೋಗಿ ಎಲ್ಲಾ ಸಂಗತಿ ಹೇಳಿ ಅವನು ಹೇಳಿದಂತೆ ಮಾಡು " ಎಂದು ಹೇಳಿಬಿಟ್ಟನು.

ಪರಶುರಾಮನು ಬ್ರಹ್ಮನ ಬಳಿಗೆ ಹೋಗಿ, ಪ್ರಶ್ನೆಯ ಹಿಂದುಮುಂದುಗಳ ವಿವರಗಳನ್ನು ಹೇಳಿ, ಆತನ ಅಭಿಪ್ರಾಯವೇನೆಂದು ಕೇಳಿದನು. ಬ್ರಹ್ಮನಿಗೂ ಪರಶುರಾಮನ ಘೋರ ಪ್ರತಿಜ್ಞೆ ರುಚಿಸಲಿಲ್ಲ. ಆದರೆ ಅದನ್ನು ಸ್ಪಷ್ಟವಾಗಿ ಹೇಳಲು ಇಷ್ಟವಿಲ್ಲದೆ " ಈಶ್ವರನ ಅನುಗ್ರಹವಿಲ್ಲದೆ ನಿನ್ನ ಪ್ರತಿಜ್ಞೆ ನೆರವೇರಲು ಸಾಧ್ಯವಿಲ್ಲ. ಆದುದರಿಂದ ಶಿವನ ಬಳಿಗೆ ಹೋಗಿ ಕೇಳಿಕೋ " ಎಂದನು.

ಪರಶುರಾಮನು ಸೀದಾ ಶಿವನ ಬಳಿಗೆ ಹೋದನು. ಶಿವನೊಂದಿಗೆ ಪಾರ್ವತಿಯೂ ಇದ್ದಳು. ಪರಶುರಾಮನು ಹೇಳಿದ ಮಾತುಗಳನ್ನು ಕೇಳಿ ಪಾರ್ವತಿ, " ದುಡುಕಿ ಪ್ರತಿಜ್ಞೆಯನ್ನೇನೋ ಮಾಡಿದೆ. ಅದಕ್ಕೆ ತಕ್ಕ ಅಸ್ತ್ರಗಳು ನಿನ್ನಲ್ಲಿಲ್ಲವಲ್ಲಾ ! ಅದಕ್ಕೇ ಬಂಗೆ



ಯೇನು?" ಎಂದಳು. ಅವಳ ಮಾತು ಕೇಳಿ ಸಂಹಾರ ಕಾರಕನಾದ ಶಿವನು ಮುಗುಳುನಗುತ್ತ, ಪರಶು ರಾಮನಿಗೆ ಅಸ್ತ್ರಗಳನ್ನೂ ಕವಚವನ್ನೂ ಕೊಟ್ಟನು.

ಪರಶುರಾಮನು ಶಿವನ ಅನುಜ್ಞೆ ಪಡೆದು ಹಿಂದಿರುಗಿ ಬರುತ್ತ, ಒಂದು ಕೊಳದ ಬದಿಯಲ್ಲಿ ಅಸ್ತ್ರಗಳನ್ನೆಲ್ಲ ಇಟ್ಟು, ಕೊಳದಲ್ಲಿ ಕೈ ಕಾಲು ಮುಖ ತೊಳೆದುಕೊಂಡು ಸಂಧ್ಯಾವಂದನೆಗೆ ತೊಡಗಿ ಜಪ ಮಾಡುತ್ತ ಕುಳಿತನು.

ಆಗ ಯಾರಿಂದಲೋ ಓಡಿಸಿಕೊಂಡು ಬಂದುವು ಗಳಂತೆ, ಕೆಲವು ಜಿಂಕೆಗಳು ಅತಿ ವೇಗವಾಗಿ ಓಡಿ ಬಂದು, ಕೊಳವನ್ನು ನೋಡಿ ತಟ್ಟನೆ ನಿಂತು, ನೀರು ಕುಡಿಯಲು ತೊಡಗಿದುವು. ಅವುಗಳನ್ನು ಓಡಿಸಿ ಕೊಂಡು ಬಂದ ಬೇಟೆಗಾರನು ಪರಶುರಾಮನಿಗೆ ಕಾಣಿಸಲಿಲ್ಲ. ಆದರೆ ಜಿಂಕೆಗಳಲ್ಲಿ ಒಂದು ಗಂಡು ಜಿಂಕೆ ಹೆಣ್ಣು ಜಿಂಕೆಯೊಂದಿಗೆ, "ಇನ್ನು ನಮಗೆ ಭಯವಿಲ್ಲ. ಇಲ್ಲಿ ಜಪಮಾಡುವವನು ಪರಶುರಾಮ. ಇವನು ಅಗಸ್ತ್ಯನ ಆಶ್ರಮಕ್ಕೆ ಹೋಗಿ ಮುಂದಿನ ಅವತಾರವಾದ ಕೃಷ್ಣಾಮೃತ ಸ್ತೋತ್ರವನ್ನು ಕೇಳಿದ ನಾದರೆ ಇವನಿಗೆ ಕೃಷ್ಣಕವಚವು ಲಭಿಸಿಬಿಡುತ್ತದೆ" ಎಂದು ಹೇಳಿದ ಮಾತುಗಳು ಪರಶುರಾಮನಿಗೆ ಸ್ಪಷ್ಟವಾಗಿ ಕೇಳಿದುವು.

ಅದನ್ನು ಗ್ರಹಿಸಿ ಪರಶುರಾಮನು ನೆಟ್ಟಗೆ ಅಗಸ್ತ್ಯಾಶ್ರಮಕ್ಕೆ ಹೊರಟನು. ದಾರಿಯಲ್ಲಿ ಅವನಿಗೆ ಜಿಂಕೆಗಳನ್ನು ಓಡಿಸಿದ ಬೇಟೆಗಾರನು ಸಿಕ್ಕಿದನು. ಅವನು ಜಿಂಕೆಗಳನ್ನು ಕಾಣದೆ ಸಿಟ್ಟಿನಿಂದ ಪರಶುರಾಮನ ಮೇಲೆ ಏರಿಬರುವುದನ್ನು ನೋಡಿ, ಪರಶುರಾಮನು ಅವನನ್ನುಕೊಂದು, ಅಗಸ್ತ್ಯಾ ಶ್ರಮಕ್ಕೆ ಹೋಗಿ ಕೃಷ್ಣ ಸ್ತೋತ್ರವನ್ನು ಕೇಳಿದನು. ಆಗ ಕೃಷ್ಣನು ಪ್ರತ್ಯಕ್ಷನಾಗಿ ಪರಶುರಾಮನಿಗೆ ತನ್ನ ತೇಜಸ್ಸನ್ನು ನೀಡಿದನು. ತರುವಾಯ ಪರಶು ರಾಮನು ನರ್ಮದಾನದಿಯಲ್ಲಿ ಸ್ನಾನಮಾಡಿ ಕಾರ್ತ ವೀರ್ಯನಿರುವ ನಗರಕ್ಕೆ ಹೋದನು. ತಾನು ಕಾರ್ತವೀರ್ಯನೊಂದಿಗೆ ಯುದ್ಧವನ್ನು ಕೇಳಬಂದವ ನೆಂದು ಸುದ್ದಿ ಕಳುಹಿಸಿದನು.



"ಬರಲಿ. ಬ್ರಾಹ್ಮಣನು ಏನು ಕೇಳಿದರೂ ಇಲ್ಲ ವೆನ್ನಲಾರೆ. ಜಮದಗ್ನಿಯ ಮಗನು ಯುದ್ಧವನ್ನು ಕೇಳುವನೇ? ಕೊಡುತ್ತೇನೆ" ಎಂದು ಕಾರ್ತವೀರ್ಯ ನಿಂದ ಪ್ರತ್ಯುತ್ತರ ಬಂತು.

ಆಮೇಲೆ ಕಾರ್ತವೀರ್ಯಾರ್ಜುನನು ತನ್ನ ಸೇನೆ ಯನ್ನೆಲ್ಲಾ ಪರಶುರಾಮನ ಮೇಲೆ ಯುದ್ಧಕ್ಕೆ ಕಳುಹಿಸಿದನು. ಎಲ್ಲಾ ಸೇನೆಯೂ ಪರಶುರಾಮನ ಕೊಡಲಿಗೆ ಬಲಿಯಾಯಿತು.

ಅನಂತರ ಅವನ ಸ್ನೇಹಿತರಾದ ಅನೇಕ ಮಂದಿ ಇತರ ಕ್ಷತ್ರಿಯರು ಬಂದು ಯುದ್ಧ ಮಾಡಿ ಸತ್ತರು. ಮತ್ಸ್ಯರಾಜ, ಮಗಧರಾಜ, ನಿಷಾದರಾಜ, ವಿದರ್ಭ ರಾಜನಾದ ಸೋಮದತ್ತ, ಮಿಥಿಲೆಯ ರಾಜ ನಾದ ಬೃಹದ್ಬಲ ಮೊದಲಾದವರೆಲ್ಲ ರಣರಂಗದಲ್ಲಿ ಪರಶುರಾಮನಿಂದ ಮಡಿದರು. ಕನ್ಯಾಕುಬ್ಜದ ರಾಜನೂ, ಸೌರಾಷ್ಟ್ರರಾಜನೂ, ಅವಂತಿಯ ಅನೇಕ ಮಂದಿ ವೀರರೂ ಒಂದೇ ಸಾರಿ ಪರುಶುರಾಮನ ಮೇಲೆ ಮುಗಿಬಿದ್ದು ಬಾಣವರ್ಷ ಮಾಡಿದರು. ಪರಶುರಾಮನು ಆ ಬಾಣಗಳೆಲ್ಲವನ್ನೂ ಭಗ್ನಗೊಳಿಸಿ ಅವರೆಲ್ಲರನ್ನೂ ಕೊಂದುಬಿಟ್ಟನು.

ಸುಚಂದ್ರನೆಂಬ ರಾಜನು ಪರಶುರಾಮನ ಮೇಲೆ ಯುದ್ಧಕ್ಕೆ ಬಂದು ಅವನ ಮೇಲೆ ಶಿವನಿಂದ ತಾನು ಪಡೆದ ತ್ರಿಶೂಲವನ್ನೇ ಬೀಸಿದನು. ಅದು ಪುಷ್ಪ ಮಾಲೆಯಾಗಿ ಪರುಶುರಾಮನ ಕೊರಳನ್ನು ಅಲಂಕರಿ ಸಿತು. ಆಕ್ಷಣದಲ್ಲಿ ಪರಶುರಾಮನಿಗೆ ಕಾಳೀದೇವಿ ಪ್ರತ್ಯಕ್ಷವಾಗಿ, ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದರೆ ಸುಚಂದ್ರನು ಸಾಯುವನೆಂದು ತಿಳಿಸಿ ಮಾಯ ವಾದಳು. ಮರುಕ್ಷಣದಲ್ಲಿ ಪರಶುರಾಮನು ಪ್ರಯೋಗಿಸಿದ ಆಗ್ನೇಯಾಸ್ತ್ರದಿಂದ ಸುಚಂದ್ರನು ಸತ್ತನು. ಅನಂತರ ಅವನ ಮಗ ಪುಷ್ಕರಾಕ್ಷ ನನ್ನೂ ಪರಶುರಾಮನು ಕೊಂದನು.

ಇಷ್ಟು ಮಂದಿ ಸತ್ತ ಮೇಲೆಯೇ ಕಾರ್ತ ವೀರ್ಯಾರ್ಜುನನು ಸ್ವತಃ ಪರಶುರಾಮನ ಮುಂದೆ ಯುದ್ಧಕ್ಕೆ ಬಂದು ತ್ರಿಶೂಲದಿಂದ ಪರಶುರಾಮ ನನ್ನು ಮೂರ್ಛೆ ಬೀಳಿಸಿದನು. ಅದನ್ನು ನೋಡಿ ದೇವತೆಗಳೆಲ್ಲಾ ಗಾಬರಿಯಾಗಿ ಶಿವನನ್ನು ಕರೆದು ಕೊಂಡು ಬಂದರು. ಶಿವನು ಸಂಜೀವಿನಿಯಿಂದ ಪರಶುರಾಮನನ್ನು ಬದುಕಿಸಿದನು.

ಪರಶುರಾಮನು ಎದ್ದು ಶಿವಕವಚ ಸ್ತೋತ್ರ ವನ್ನು ಪಠಿಸಿ, ಕಾರ್ತವೀರ್ಯನ ಮೇಲೆ ಬಾಣ ಪ್ರಯೋಗ ಮಾಡಿದನು. ಅದು ಕಾರ್ತವೀರ್ಯಾರ್ಜು ನನ ತಲೆಯನ್ನು ಒಡೆದು ಹಾಕಿತು. ಆಮೇಲೆ ಮುಗಿಬಿದ್ದ ಕಾರ್ತವೀರ್ಯನ ಮಗಂದಿರೆಲ್ಲಾ ಪರಶು ರಾಮನ ಕೈಯಲ್ಲಿ ಸತ್ತು ಹೋದರು.

—(ಮುಂದುವರಿಯುವುದು)





# ಮಹಾ ಪ್ರಸ್ಥಾನ

ಮಹಾಭಾರತ ಯುದ್ಧದಲ್ಲಿ ಗೆದ್ದ ಪಾಂಡವರು ಬಹಳ ಕಾಲದವರೆಗೆ ಸುಖವಾಗಿ ರಾಜ್ಯಭಾರ ಮಾಡಿದರು. ಕೊನೆಗಾಲ ಸಮೀಪಿಸಲು ಧರ್ಮ ರಾಜನು ಎಲ್ಲಾ ಬಿಟ್ಟು ಮಹಾಪ್ರಸ್ಥಾನ ಮಾಡಲು ಸಂಕಲ್ಪಿಸಿದನು.

ರಾಜತ್ಯಾಗ ಮಾಡಲು ಸಿದ್ಧನಾದ ಧರ್ಮ ರಾಜನು ತಮ್ಮ ಮೊಮ್ಮಗನಾದ ಪರೀಕ್ಷಿತ್ತುವಿಗೆ ಮಹಾ ವೈಭವದಿಂದ ಪಟ್ಟಾಭಿಷೇಕ ಮಾಡಿದನು. ಋಷಿಗಳೂ ಸಾಮಂತರೂ ಪರೀಕ್ಷಿತ್ತುವನ್ನು ಆಶೀರ್ವದಿಸಿದರು.





ಅನಂತರ ಪಾಂಡವರು ಹಿಮಾಲಯದ ಕಡೆಗೆ ಹೊರಟರು. ಅವರ ಹಿಂದೆ ದ್ರೌಪದಿ ಕೂಡಾ ಹೊರಟಳು. ಎಲ್ಲರೂ ಸಾಮಾನ್ಯವಾದ ಉಡುಗೆ ಯಿಂದ ಹೊರಟಿದ್ದರು. ರಾಜ್ಯ ವೈಭವಗಳನ್ನು ಬಿಟ್ಟ ಚಿಂತೆ ಅವರಿಗಿಲ್ಲ.



ಹೋಗಿ ಹೋಗಿ ಅವರೆಲ್ಲಾ ಹಿಮಾಲಯ ಪರ್ವತದ ಮೇಲೆ ಏರತೊಡಗಿದರು. ಬಹಳ ಕಷ್ಟವಾದ ದಾರಿ; ಅತಿ ದೀರ್ಘ ಪ್ರಯಾಣ. ಎಷ್ಟೋ ಪುಣ್ಯಸ್ಥಳಗಳೂ, ಋಷ್ಯಾಶ್ರಮಗಳೂ, ದೇವತಾ ನಿವಾಸಗಳೂ ಇದ್ದುವು. ಅದಾವುದರ ಪರಿವೆಯೂ ಇಲ್ಲದೆ ಅವರು ನಡೆಯುತ್ತಿರಲು, ಮೊದಲು ದ್ರೌಪದಿ ಬಿದ್ದುಸತ್ತಳು. ಅನಂತರ ಪಾಂಡವರು ಒಬ್ಬೊಬ್ಬರೇ ಬಿದ್ದು ಸತ್ತು ಹೋಗಲು ತೊಡಗಿದರು. ಕಡೆಗೆ ಧರ್ಮರಾಜನೊಬ್ಬನೇ ಉಳಿದನು.

ಒಬ್ಬಂಟಿಗನಾಗಿ ನಡೆಯುತ್ತಿದ್ದ ಧರ್ಮರಾಜನು ತನ್ನ ಹಿಂದೆ ಒಂದು ನಾಯಿ ಬರುತ್ತಿರುವುದನ್ನು ಗಮನಿಸಿದನು. ದಾರಿ ಎಷ್ಟೇ ಕಠಿಣವಾಗಿದ್ದರೂ ಸಹ ಆ ನಾಯಿ ಧರ್ಮರಾಜನನ್ನು ಬಿಡದೆ ಅನುಸರಿಸಿಕೊಂಡಿತ್ತು.





ಧರ್ಮರಾಜನು ಹಿಮಾಲಯದ ಶಿಖರವನ್ನು ಸೇರಿದ ಕೂಡಲೇ ಇಂದ್ರನು ಬಂದು ಅವನನು ಸ್ವರ್ಗಕ್ಕೆ ಹೋಗೋಣವೆಂದು ಆಹ್ವಾನಿಸಿದನು. ತನ್ನೊಂದಿಗೆ ಈ ನಾಯಿಕೂಡಾ ಬರಬಹುದಾದರೇನೇ ತಾನು ಸ್ವರ್ಗಕ್ಕೆ ಬರುವೆನೆಂದು ಧರ್ಮರಾಜನು ಹೇಳಿದನು.

ಇಂದ್ರನು ಅದಕ್ಕೆ ಒಪ್ಪಲಿಲ್ಲ. ಧರ್ಮರಾಜನು ಇಂದ್ರನ ರಥದಲ್ಲಿ ಏರಲೂ ಇಲ್ಲ. ಆಗ ನಾಯಿ ಯಮಧರ್ಮರಾಜನ ರೂಪದಲ್ಲಿ ಪ್ರತ್ಯಕ್ಷವಾಯಿತು. ಯಮನು ಮಾಡಿದ ಈ ಪರೀಕ್ಷೆಯಲ್ಲಿ ಧರ್ಮರಾಜನು ತೇರ್ಗಡೆಯಾದನು.





ಅನಂತರ ಸ್ವರ್ಗ ಸೇರಿದ ಧರ್ಮರಾಜನನ್ನು ದೇವತೆಗಳೆಲ್ಲಾ ಸ್ವಾಗತ ಮಾಡಿದರು. ಧರ್ಮರಾಜನು ಸ್ವರ್ಗದಲ್ಲಿ ತನ್ನ ತಮ್ಮಂದಿರೂ, ದ್ರೌಪದಿಯೂ ಇರಬಹುದೆಂದು ನೋಡಿದರೆ, ಅವರೆಲ್ಲಾ ನರಕದಲ್ಲಿರುವ ಸಂಗತಿ ಗೊತ್ತಾಯಿತು. ಧರ್ಮರಾಜನು ತಾನೂ ಸಹ ನರಕಕ್ಕೇ ಹೋಗುವೆನೆಂದು ಹಟ ಹಿಡಿದನು.

ಅವನನ್ನು ನರಕದ ದ್ವಾರದ ಬಳಿಗೆ ಒಯ್ದು ತೋರಿಸಲಾಯಿತು. ಅಲ್ಲಿ ತಮ್ಮಂದಿರನ್ನೂ ದ್ರೌಪದಿಯನ್ನೂ ಕಾಣಲಿಲ್ಲ. ತಾನು ಸಣ್ಣದೊಂದು ಪಾಪ ಮಾಡಿದುದರಿಂದಲೇ ನರಕದ ದರ್ಶನವಾಯಿತೆಂದು ಮತ್ತೆ ಗೊತ್ತಾಯಿತು ಧರ್ಮರಾಜನಿಗೆ. ದ್ರೌಪದಿಯೂ ತಮ್ಮಂದಿರೂ ಸ್ವಲ್ಪಕಾಲ ನರಕದಲ್ಲಿದ್ದು ಆಗಲೇ ಸ್ವರ್ಗ ಸೇರಿದ್ದರೆಂದು ಆ ಮೇಲೆ ತಿಳಿದನು.






ತರುವಾಯ ಧರ್ಮರಾಜನು ಸ್ವರ್ಗಕ್ಕೆ ಹಿಂದಿರುಗಿ ಶಾಶ್ವತವಾಗಿ ಸ್ವರ್ಗವಾಸಿಯಾದನು. ಪ್ರಾಪಂಚಿಕ ಜೀವನದಲ್ಲಿರುವ ಮನುಷ್ಯನು ಪುಣ್ಯಾತ್ಮನಾಗಿರಲು ಸಾಧ್ಯವಿದೆ ಎಂಬುದಕ್ಕೆ ಧರ್ಮರಾಜನ ಜೀವಿತವು ಉತ್ತಮ ನಿದರ್ಶನ.



# ನಿಜವಾದ ರತ್ನ

ಪೂರ್ವ ಕಾಲದಲ್ಲಿ ಸಿದ್ಧೀಪುರವೆಂಬ ಊರಿನಿಂದ ಸ್ನೇಹಿತರಾದ ನಾಗರಾಜ ಮತ್ತು ಕೃಷ್ಣರಾಜ ಎಂಬವರು ತೀರ್ಥಯಾತ್ರೆ ಮಾಡಲು ಹೊರಟರು. ಅವರು ಕುದುರೆಗಳ ಮೇಲೆ ಪ್ರಯಾಣ ಮಾಡುತ್ತ ಅನೇಕ ಕ್ಷೇತ್ರಗಳನ್ನು ದರ್ಶಿಸಿ ಕಾಶಿಗೆ ಹೋದರು. ಅಲ್ಲಿಯ ವಿಶ್ವೇಶ್ವರನ ದರ್ಶನ ಮಾಡಿ, ಪ್ರಯಾಗದಲ್ಲಿ ತ್ರಿವೇಣೀ ಸಂಗಮದಲ್ಲಿ ಮಿಂದು ಹಿಂದಿರುಗಿ ಪ್ರಯಾಣ ಮಾಡ ತೊಡಗಿದರು. ತಮ್ಮ ಊರಿನವರಿಗೆ ಹಂಚಲಿಕ್ಕಾಗಿ ಒಂದು ಪೀಪಾಯಿಯಲ್ಲಿ ಗಂಗಾಜಲವನ್ನೂ ಒಯ್ಯುತ್ತಿದ್ದರು,

ದಾರಿಯಲ್ಲಿ ಒಂದು ಕಡೆ ಒಂದು ಮರದ ಕೆಳಗೆ ಒಬ್ಬ ಮುದುಕನೂ ಅವನ ಹೆಂಡತಿಯೂ ಕುಳಿತಿದ್ದರು. ಮುದುಕನ ಹೆಂಡತಿ ಅವರನ್ನು ನಿಲ್ಲಿಸಿ, "ನಿಮ್ಮನ್ನು ನೋಡಿದರೆ ಯಾತ್ರಿಕರ ಹಾಗೆ ಕಾಣುವಿರಿ. ನನ್ನ ಗಂಡನಿಗೆ ಸ್ವಲ್ಪ ಗಂಗಾಜಲ ಕೊಡುವಿರಾ?" ಎಂದು ಕೇಳಿದಳು. "ನಾವೇ ಎಲ್ಲಿಂದಲೋ ಕಷ್ಟಪಟ್ಟು ಹೊತ್ತುಕೊಂಡು ಹೋಗುವ ಗಂಗಾಜಲವನ್ನು ದಾರಿಯಲ್ಲಿ ಕೇಳಿದವರಿಗೆ ಕೊಟ್ಟರೆ ತೀರೇ ಹೋಯಿತು. ನಮಗೇನಿದೆ ಮತ್ತೆ?" ಎಂದನು ನಾಗರಾಜ.

"ಪಾಪ, ವೃದ್ಧರಿಗಾಗಿ ಕೇಳುತ್ತಿದ್ದಾರೆ. ಸ್ವಲ್ಪ ಕೊಡೋಣ" ಎಂದು ಕೃಷ್ಣರಾಜನು ತನ್ನ ಪೀಪಾಯಿಯನ್ನು ಎತ್ತಿ "ತೆಗೆದುಕೊಳ್ಳಿ. ನಿಮಗೆಷ್ಟು ಬೇಕೋ ತೆಗೆದುಕೊಳ್ಳಿ" ಎಂದನು.

ಅವಳು ಆ ಪೀಪಾಯಿಯಿಂದ ಒಂದು ಲೋಟಿಗೆ ಸ್ವಲ್ಪ ಗಂಗಾಜಲ ಸುರಿದುಕೊಂಡು ಮುದುಕನಿಗೆ ಕುಡಿಸಿದಳು. ಕೂಡಲೇ ಆ ಮುದುಕನು ಶಕ್ತಿ ಬಂದವನಂತೆ ಎದ್ದುನಿಂತು, ಕುದರೆಯ ಮೇಲಿದ್ದ ಕೃಷ್ಣರಾಜನ ಬಳಿಗೆ ಬಂದು, ನಮಸ್ಕಾರಮಾಡಿ. "ಅಯ್ಯಾ! ನಿಮಗೆ ಸುಸ್ವಾಗತ! ಈ ದಿನ ನೀವಿಬ್ಬರೂ ನನ್ನ ಮನೆಗೆ ಅತಿಥಿಗಳಾಗಿ ದಯಮಾಡಬೇಕು. ನನ್ನ ಹೆಸರು ವಿಶಾಲ ಗುಪ್ತ. ಉಳಿದ ವಿಷಯವನ್ನೆಲ್ಲಾ ಮನೆಯಲ್ಲಿ ಹೇಳುತ್ತೇನೆ" ಎಂದು ಹೇಳಿ ನಾಗರಾಜನ ಕಡೆಗೆ ತಿರುಗಿ, "ನೀವೂ ಬನ್ನಿ" ಎಂದನು.

ಕೃಷ್ಣರಾಜನೂ ನಾಗರಾಜನೂ ಆಶ್ಚರ್ಯ ಪಡುತ್ತ, ವಿಶಾಲಗುಪ್ತನೊಂದಿಗೆ ಹೋಗಿ, ಅಂದವಾದೊಂದು ಭವನವನ್ನು ತಲಪಿದರು. ಅಲ್ಲಿ ವಿಶಾಲ ಗುಪ್ತನಿಗೆ ಅನೇಕಮಂದಿ ಸೇವಕರಿದ್ದರು. ವಿಶಾಲ ಗುಪ್ತನ ಹೆಂಡತಿಯಾಗಿ ನಟಿಸಿದವಳು ಒಬ್ಬಳು

ಆರ್. ಎಸ್. ನಾರಾಯಣಮೂರ್ತಿ



ಪರಿಚಾರಿಕೆಯೇ ಎಂಬ ಸಂಗತಿ ಅಲ್ಲಿ ಸ್ಪಷ್ಟವಾಯಿತು. ಆ ದಿನ ರಾತ್ರಿ ಅತಿಥಿಗಳಿಗೆ ಒಳ್ಳೆಯ ರೀತಿಯಲ್ಲಿ ಆದರೋಪಚಾರಗಳು ನಡೆದುವು. ರಾತ್ರಿಯ ಭೋಜನಾ ನಂತರ ವಿಶಾಲಗುಪ್ತನು ಕೃಷ್ಣರಾಜ ನೊಂದಿಗೆ ಹೀಗೆ ಹೇಳಿದನು.

"ನನ್ನ ತಂದೆ ಧನಗುಪ್ತರು ದೇಶಾಂತರಗಳಿಗೆ ಹೋಗಿ ವ್ಯಾಪಾರ ನಡೆಸುತ್ತ ಅಂತ್ಯವಿಲ್ಲದಷ್ಟು ಧನರತ್ನಗಳನ್ನು ಸಂಪಾದಿಸಿದ್ದಾರೆ. ಅವರು ಸತ್ತು ಹೋಗುವ ಮೊದಲು ಪ್ರತಿ ಚೈತ್ರ ಪೂರ್ಣಿಮೆಯ ದಿನ ಒಬ್ಬ ಸಜ್ಜನನಿಗೆ ಒಂದು ರತ್ನವನ್ನು ಕೊಡ ಬೇಕೆಂದು ನನಗೆ ಆದೇಶಿಸಿದ್ದಾರೆ. ನಾನು ಪ್ರತಿ ವರ್ಷವೂ ಏನೋ ಒಂದು ವೇಷ ಹಾಕಿಕೊಂಡು ಆ ದಿನ ಒಬ್ಬ ಸಜ್ಜನನಿಗಾಗಿ ಹುಡುಕುತ್ತಾ ಇರುತ್ತೇನೆ. ಈ ವರ್ಷ ನನಗೆ ನೀವು ಸಿಕ್ಕಿ ಸಂತೃಪ್ತಿಗೊಳಿಸಿದಿರಿ. ನಿಮಗೆ ಒಂದು ರತ್ನ ಕೊಡುತ್ತೇನೆ. ಅದನ್ನು ಸ್ವೀಕರಿಸಿ ನನ್ನನ್ನು ಧನ್ಯನನ್ನಾಗಿ ಮಾಡಿರಿ!"

ಆಕಸ್ಮಿಕವಾದ ಈ ಅದೃಷ್ಟವನ್ನು ನೋಡಿ ಕೃಷ್ಣರಾಜನಿಗೆ ಆಶ್ಚರ್ಯವಾಯಿತು. ಕೃಷ್ಣರಾಜನ ಕೈಗೆ ವಿಶಾಲಗುಪ್ತನು ರತ್ನವನ್ನು ಕೊಟ್ಟಾಗ ನಾಗರಾಜನಿಗೆ ಈರ್ಷ್ಯೆಯುಂಟಾಯಿತು!

ಮರುದಿನ ಬೆಳಿಗ್ಗೆ ಕೃಷ್ಣರಾಜ, ನಾಗರಾಜರು ಹೊರಡಲು ಸಿದ್ಧರಾದರು. ಆಗ ವಿಶಾಲಗುಪ್ತನು, "ನೀವು ಸಿದ್ದೀಪುರಕ್ಕೆ ತಾನೇ ಹೋಗುವಿರಿ? ನಿಮಗೆ ದಾರಿಯಲ್ಲಿ ತಗಲುವ ನಾಗಪುರದಲ್ಲಿ ಫಕ್ರಾಜನೆಂಬ ರತ್ನ ವರ್ತಕನೊಬ್ಬ ನಿದ್ದಾನೆ. ಅವನು ನಿಮಗೆ ನಾನು ಕೊಟ್ಟ ರತ್ನದ ನ್ಯಾಯವಾದ ಬೆಲೆಯನ್ನು ಕೊಡುತ್ತಾನೆ" ಎಂದನು. ಹಾಗೆಯೇ ಆಗಲೆಂದು ಅವರು ಅಲ್ಲಿಂದ ಹೊರಟರು.

ಆ ರತ್ನವನ್ನು ಅಪಹರಿಸಿ ಬಿಡಬೇಕೆಂದು ನಾಗ ರಾಜನಿಗೆ ತೀವ್ರವಾದ ಕೋರಿಕೆಯುಂಟಾಯಿತು. ದಾರಿಯಲ್ಲಿ ಅವರಿಬ್ಬರೂ ಒಂದು ಛತ್ರದಲ್ಲಿ ತಂಗಿದ್ದಾಗ, ರಾತ್ರಿಯಲ್ಲಿ ನಾಗರಾಜನು ಕೃಷ್ಣರಾಜನ ಬಳಿಯಲ್ಲಿದ್ದ ರತ್ನವನ್ನು ಅಪಹರಿಸಿ, ತನ್ನ ಬಟ್ಟೆ ಯೊಳಗೆ ಕಟ್ಟಿಕೊಂಡನು. ಬೆಳಗಾದ ಮೇಲೆ ತನ್ನ ಹತ್ತಿರವಿದ್ದ ರತ್ನವನ್ನು ಯಾರೋ ಕದ್ದರೆಂದು ಕೃಷ್ಣ ರಾಜನಿಗೆ ಗೊತ್ತಾಯಿತು. ಆ ಸಂಗತಿಯನ್ನು ಅವನು ನಾಗರಾಜನೊಂದಿಗೆ ಹೇಳಿದಾಗ, ಅವನು ತುಂಬಾ ಆಶ್ಚರ್ಯ ನಟಿಸಿ, "ಅದು ಸಿಕ್ಕುವವರೆಗೂ ಈ ಊರನ್ನು ಬಿಡಬಾರದು" ಎಂದನು.

"ಹಾಗೆ ಗುರುತು ಪರಿಚಯವಿಲ್ಲದ ಊರಿನಲ್ಲಿರು ವುದರಲ್ಲಿ ಅರ್ಥವಿಲ್ಲ. ಛತ್ರದಲ್ಲಿ ಯಾರು ಕದ್ದರೋ ಏನೋ! ಅದು ಹೇಗೆ ಬಂತೋ ಹಾಗೇ ಹೋಯಿತು!" ಎಂದನು ಕೃಷ್ಣ ರಾಜ ನಿರ್ಲಿಪ್ತತೆಯಿಂದ.

ಅಲ್ಲಿಂದ ಅವರು ಪ್ರಯಾಣಮಾಡುತ್ತ ನಾಗಪುರ ವನ್ನು ತಲಪಿದರು. ವಿಶಾಲಗುಪ್ತನು ಹೇಳಿದ ಫಕ್ರಾಜವರ್ತಕನ ನೆನಪು ಕೃಷ್ಣರಾಜನಿಗೆ ಬಂದು, "ಆ ಫಕ್ರಾಜನನ್ನು ನೋಡಿ ಹೋಗೋಣ" ಎಂದನು.

"ಸುಮ್ಮನೆ ಆತನನ್ನು ನೋಡುವುದೇಕೆ?" ಎಂದ ನಾಗರಾಜ. "ವಿಶಾಲಗುಪ್ತನೊಂದಿಗಾದ ಸ್ನೇಹವು ಇವನನ್ನು ನೋಡಿದರೆ ಪೂರ್ತಿಯಾಗುವುದಷ್ಟೆ? ಆತನ ಸ್ನೇಹಿತನು ಎಂಥವನೆಂದೂ ಗೊತ್ತಾಗುತ್ತದೆ. ರತ್ನವನ್ನು ಮಾರಲಿಕ್ಕೇ ಹೋಗಬೇಕೆಂದಿಲ್ಲವಷ್ಟೆ?" ಎಂದನು ಕೃಷ್ಣರಾಜ.

"ಹಾಗಾದರೆ ನೀನು ಹೋಗಿ ಬಾ. ಅಷ್ಟರೊಳಗೆ ನಾನು ಊರು ತಿರುಗಾಡಿ ಬಂದುಬಿಡುತ್ತೇನೆ". ಎಂದನು ನಾಗರಾಜ.

ಕೃಷ್ಣರಾಜನು ಹೊರಟು ಹೋದ ಕೂಡಲೇ ನಾಗರಾಜನು ತಾನು ಅಪಹರಿಸಿದ ರತ್ನವನ್ನು ತೆಗೆದುಕೊಂಡು ಅಲ್ಲಿಯ ಒಬ್ಬ ರತ್ನವರ್ತಕನ ಬಳಿಗೆ ಹೋಗಿ, ಅದನ್ನು ಅವನಿಗೆ ತೋರಿಸಿ, "ಇದನ್ನು ನೀವು ಎಷ್ಟಕ್ಕೆ ಕೊಂಡುಕೊಳ್ಳುವಿರಿ?" ಎಂದು ಕೇಳಿದನು.

ಆ ವರ್ತಕನು ಅದನ್ನು ನೋಡಿದ ಕೂಡಲೇ, "ಇದು ನಿಮಗೆ ಹೇಗೆ ಸಿಕ್ಕಿತು?" ಎಂದು ಕೇಳಿದನು.

"ನನ್ನ ತಂದೆ ಬಹಳ ಧನ ಕೊಟ್ಟು ಕೊಂಡುಕೊಂಡಿದ್ದರು. ನನಗೀಗ ಹಣದ ಗರ್ಜಿ ಬಂದಿದೆ. ಅದಕ್ಕೇ ಮಾರಬೇಕೆಂದು ತಂದೆ. ಈಗಿನ ದರ ಹೇಗಿದೆ?" ಎಂದು ಕೇಳಿದನು ನಾಗರಾಜ.

ವರ್ತಕನು ನಕ್ಕು, "ಇದಕ್ಕೆ ಈಗಲೂ ಆಗಲೂ ಒಂದೇ ಬೆಲೆ. ನಿಮ್ಮ ತಂದೆಯನ್ನು ಯಾರೋ ಚೆನ್ನಾಗಿ ಮೋಸಪಡಿಸಿದ್ದಾರೆ. ಇದು ಸಾಧಾರಣ ಗಾಜಿನ ತುಂಡು. ಚಿಕ್ಕಾಸಿಗೂ ಕೊಂಡುಕೊಳ್ಳಲಾರರು" ಎಂದು ಅದನ್ನು ವಾಪಾಸು ಕೊಟ್ಟನು.

ಅದನ್ನು ಕೇಳಿ ನಾಗರಾಜನಿಗೆ ಒಂದುವಿಧವಾದ ತೃಪ್ತಿಯೇ ಆಯಿತು. ವಿಶಾಲಗುಪ್ತನು ಕೃಷ್ಣರಾಜನನ್ನು ಏತಕ್ಕೋ ಮೋಸಪಡಿಸಿದ್ದಾನೆ. ತಾನು ಮಾಡಿದ್ದು ಕಳ್ಳತನವೇ ಹೊರತು, ವಿಶಾಲಗುಪ್ತನು ಕೃಷ್ಣರಾಜನಿಗೆ ಮಾಡಿದ ಮೋಸ ಹೆಚ್ಚು ದಾರುಣವಾದುದು! ಇದು ನಾಗರಾಜನಿಗೊಂದು ಸಮಾಧಾನದ ವಿಷಯವಾಗಿ, ಅವನ ಈರ್ಷ್ಯೆಗೆ ಉಪಶಾಂತಿ ದೊರಕಿ, ಸಮಾಧಾನದ ಉಸಿರು ಬಂತು.



ಇಷ್ಟರಲ್ಲಿ ಅತ್ತ ಕೃಷ್ಣರಾಜನು ಫಕ್ರಾಜವರ್ತಕನ ಬಳಿಗೆ ಹೋಗಿ, ಮಾತಾಡಿಸಿ, ತನಗೂ ವಿಶಾಲಗುಪ್ತನಿಗೂ ಹೇಗೆ ಪರಿಚಯವಾಯಿತೆಂಬುದನ್ನು ಹೇಳಿದನು.

ಆಗ ಫಕ್ರಾಜನು ಅವನೊಂದಿಗೆ, "ನೀವು ವಿಶಾಲಗುಪ್ತನು ಕೊಟ್ಟ ರತ್ನವನ್ನು ನನಗೆ ಕೊಟ್ಟು ಅದರ ಬೆಲೆಯನ್ನು ತೆಗೆದುಕೊಳ್ಳಿ, ಹಾಗಾದರೆ!" ಎಂದನು.

"ಅದನ್ನು ದಾರಿಯ ಛತ್ರದಲ್ಲಿ ಯಾರೋ ಕದ್ದುಬಿಟ್ಟರು. ನಾನು ಅದನ್ನು ನಿಮಗೆ ಮಾರಲಿಕ್ಕಾಗಿ ಬರಲಿಲ್ಲ. ಸಜ್ಜನರಾದ ವಿಶಾಲಗುಪ್ತರ ಸ್ನೇಹಿತರಾದ ನಿಮ್ಮ ಪರಿಚಯವನ್ನೂ ಮಾಡಿಕೊಳ್ಳೋಣವೆಂದು ಬಂದೆನು. ಅಷ್ಟೇ" ಎಂದನು ಕೃಷ್ಣರಾಜ. ತನಗೆ ವಿಶಾಲಗುಪ್ತನು ರತ್ನವನ್ನು ಕೊಟ್ಟ ಸಂಗತಿ ಇವನಿಗೆ ಹೇಗೆ ತಿಳಿಯಿತೆಂದು ಆಶ್ಚರ್ಯವೂ ಆಯಿತು ಅವನಿಗೆ. "ನಿಮ್ಮೊಂದಿಗೆ ಇನ್ನೊಬ್ಬರು ಕೂಡಾ ಇದ್ದ

ರಂತಲ್ಲಾ? ಅವರೆಲ್ಲಿ? ಅವರನ್ನೇಕೆ ಬಿಟ್ಟು ಬಂದಿರಿ?" ಎಂದು ಫಕ್ರಾಜನು ಆತುರದಿಂದ ಕೇಳಿದನು.

"ಊರು ನೋಡಿ ಬರುವೆನೆಂದು ಹೋಗಿದ್ದಾರೆ. ಆತ ನನ್ನ ಮಿತ್ರನೇ!" ಎಂದನು ಕೃಷ್ಣರಾಜ ಇನ್ನಷ್ಟು ಆಶ್ಚರ್ಯದಿಂದ.

ಕೂಡಲೇ ಫಕ್ರಾಜನು ತನ್ನ ಆಳುಗಳಿಬ್ಬರನ್ನು ಕರೆದು ಅವರೊಂದಿಗೆ ತಮ್ಮ ಭಾಷೆಯಲ್ಲಿ ಏನೋ ಹೇಳಿದನು. ಅವರು ಕೂಡಲೇ ಅಲ್ಲಿಂದ ಹೊರಟು ಹೋಗಿ ಎಲ್ಲಿಂದಲೋ ನಾಗರಾಜನನ್ನು ಕರೆದುಕೊಂಡು ಬಂದರು. ಫಕ್ರಾಜನು ತನ್ನ ಆಳುಗಳಿಂದ ಆತನನ್ನು ಶೋಧಮಾಡಿಸಲು ರತ್ನವು ಸಿಕ್ಕಿತು. ಫಕ್ರಾಜನು ಆ ರತ್ನವನ್ನು ಕೃಷ್ಣರಾಜನಿಗೆ ತೋರಿಸುತ್ತ, "ನೀವು ಕಳೆದು ಹೋಯಿತೆಂದ ರತ್ನ ಇದು ತಾನೆ? ಇದಕ್ಕಾಗಿ ಚಿಂತೆಪಡಬೇಡಿ. ಇದು ಸಾಧಾರಣ ಗಾಜಿನ ತುಂಡು. ಇದರಂಥವನೇ ನಿಮ್ಮ ಮಿತ್ರನೂ ಕೂಡ! ಇದು ನಿಜವಾದ ರತ್ನವೆಂದುಕೊಂಡು ಕಳ್ಳತನಮಾಡಿ, ಈ ಊರಿನಲ್ಲಿರುವ ಯಾರೋ ವರ್ತಕರಿಗೆ ಮಾರಲು ತೋರಿಸಿರಬಹುದು. ಆದುದರಿಂದಲೇ ನಾನು ಕಳುಹಿಸಿದ ಆಳುಗಳಿಗೆ ಸಿಕ್ಕಿಬಿದ್ದನು. ನಿಮಗೆ ವಿಶಾಲಗುಪ್ತರು ಕೊಡುವೆನೆಂದ ನಿಜವಾದ ರತ್ನ ನನ್ನ ಬಳಿಗೆ ಮೊದಲೇ ಬಂದು ಸೇರಿದೆ. ಅದರ ಮೌಲ್ಯವನ್ನು ಈಗ ನಾನು ನಿಮಗೆ ಕೊಡಲಾರೆ. ನಿಮ್ಮ ಊರಿಗೆ ಕಳುಹಿಸಿ ಕೊಡುತ್ತೇನೆ. ಆದರೆ ಈಗ ನಿಮ್ಮ ಈ ಮಿತ್ರರನ್ನು ನ್ಯಾಯಾಸ್ಥಾನಕ್ಕೆ ಕಳುಹಿಸಬೇಕಾದ್ದು ನನ್ನ ಕರ್ತವ್ಯವಾಗಿದೆ" ಎಂದನು.

"ನೀವು ಕೊನೆಗೆ ಹೇಳಿದ ಮಾತಿಗೆ ಮಾತ್ರ ನಾನು ಒಪ್ಪಿಕೊಳ್ಳಲಾರೆ. ದಾರಿಯುದ್ದಕ್ಕೂ ನನ್ನೊಂದಿಗೆ ಕಷ್ಟ ಸುಖಗಳನ್ನೆಲ್ಲಾ ಹಂಚಿಕೊಂಡಿದ್ದಾನೆ ಈತ. ಅದರ ಮೇಲೆ ಅವನು ಕದ್ದುಕೊಂಡದ್ದು ಕೇವಲ ಗಾಜಿನ ತುಂಡೇ ಎಂದು ನೀವೇ ಹೇಳಿದಿರಿ. ನನ್ನ ರತ್ನದಲ್ಲಿ ಅವನಿಗೆ ಅರ್ಧಭಾಗ ಕೊಡಬೇಕೆಂದು ನಾನು ನಿಶ್ಚಯಿಸಿಕೊಂಡವನು. ಆದುದರಿಂದ ನೀವು ನನ್ನ ಮೇಲೆ ದಯವಿಟ್ಟು ನನ್ನ ಮಿತ್ರನ ಮೇಲೆ ಕಳ್ಳತನದ ತಪ್ಪು ಹೊರಿಸಬಾರದು" ಎಂದು ಕೃಷ್ಣರಾಜನು ಫಕ್ರಾಜನನ್ನು ಕೇಳಿಕೊಂಡನು.

ಆ ಮೇಲೆ ಕೃಷ್ಣರಾಜ, ನಾಗರಾಜರು ಒಟ್ಟಿಗೇ ಊರಿಗೆ ಹೊರಟರು. ಅವರು ಸಿದ್ದೀಪುರವನ್ನು ಮುಟ್ಟಿದ ಕೂಡಲೇ ರತ್ನದ ಮೌಲ್ಯದ ಮೊತ್ತವೂ ಕೃಷ್ಣರಾಜನ ಮನೆಗೆ ಬಂದು ಮುಟ್ಟಿತು. ಅದರಲ್ಲಿ ಅರ್ಧವನ್ನು ಕೃಷ್ಣರಾಜನು ನಾಗರಾಜನಿಗೆ ಕೊಡಲು ನೋಡಿದನು, "ನಾನು ಮಾಡಿದ ದುರ್ಮಾರ್ಗತನಕ್ಕೆ ನನ್ನನ್ನು ಜೈಲಾಗದಂತೆ ಕಾಪಾಡಿದೆ. ಅದೇ ನನಗೆ ಸಾಕು" ಎಂದು ನಾಗರಾಜನು, ಅದನ್ನು ತೆಗೆದುಕೊಳ್ಳಲು ನಿರಾಕರಿಸಿದನು.





# ನಿಧಿಯ ಅನ್ವೇಷಣೆ

ಒಂದು ಊರಿನಲ್ಲಿ ಚಂದ್ರಣ್ಣನೆಂಬ ಜಡಕಾ ಬಂಡಿಯವನಿದ್ದ. ಒಂದು ದಿನ ಕತ್ತಲೆಯಾದ ಮೇಲೆ ಅವನು ಜಡಾಕಾ ಸಾಗಿಸಿಕೊಂಡು ಮನೆಗೆ ಹೋಗುತ್ತಿದ್ದನು. ಆಗ ದಾರಿಯ ಬದಿಯಲ್ಲಿ ನಿಂತಿದ್ದ ಒಬ್ಬ ಮನುಷ್ಯನು, ಆ ಊರಿಗೆ ಆರು ಮೈಲು ದೂರದಲ್ಲಿದ್ದ ಒಂದು ಪಾಳುಬಿದ್ದ ಸತ್ರದ ಕಡೆಗೆ ಹೋಗಿಬರಲು ಬಂಡಿ ಬಿಡುವೆಯಾ ಎಂದು ಕೇಳಿದನು. ಚಂದ್ರಣ್ಣ ಮೊದಲು ಸಾಧ್ಯವಿಲ್ಲವೆಂದರೂ, ಒತ್ತಾಯಕೊಳ್ಳಗಾಗಿ ಬೆಳಗಾಗುವುದರೊಳಗೆ ಮನೆಸೇರಬಹುದೆಂದುಕೊಂಡು ಬಂಡಿ ಬಿಡಲು ಒಪ್ಪಿಕೊಂಡನು.

ಆ ಮನುಷ್ಯನ ಹತ್ತಿರ ಎರಡು ಗುದ್ದಲಿಗಳೂ, ಹಾರೆಗಳೂ ಉಗ್ಗೆಕಟ್ಟಿ ಬಾಯಿ ಬಿಗಿದ ಒಂದು ಬಿಂದಿಗೆಯೂ ಇದ್ದುವು. ಅವುಗಳನ್ನು ಕೂಡಾ ಬಂಡಿಯಲ್ಲಿಟ್ಟು ತಾನೂ ಕುಳಿತನು. ಆ ಮನುಷ್ಯ ಯಾವುದೋ ಪಾಳುಬಿದ್ದ ಸತ್ರದಲ್ಲಿ ಏನೋ ನಿಧಿ ಅಗೆಯಲು ಹೋಗುವನೆಂದು ಚಂದ್ರಣ್ಣ ಊಹಿಸಿದನು. ಜಡಕಾಬಂಡಿ ಸತ್ರವನ್ನು ತಲಪಿದಾಗ ಬಹಳ ಹೊತ್ತಾಯಿತು. ಬಂಡಿಯಲ್ಲಿ ಬಂದವನು ಬಿಂದಿಗೆಯನ್ನು ಇಳಿಸುವಾಗ ಅದು ಕೆಳಗೆಬಿದ್ದು ದೊಡ್ಡ ಸಪ್ಪಳವಾಯಿತು. ಆಗ ಅದರಲ್ಲಿ ತುಂಬಿದ್ದ ಹೆಂಚಿನ ತುಂಡುಗಳು ನೆಲದಲ್ಲಿ ಹೊರಳಿ ಬಿದ್ದುವು.

"ಇದೇನಯ್ಯಾ? ಈ ಹೆಂಚಿನ ತುಂಡುಗಳ ಬಿಂದಿಗೆಯನ್ನು ಇಲ್ಲಿಗೇಕೆ ತಂದಿರಿ?" ಎಂದು ಚಂದ್ರಣ್ಣ ಆ ದೊಡ್ಡ ಮನುಷ್ಯನನ್ನು ಕೇಳಿದನು. "ಎಲ್ಲಾ ಹೇಳುತ್ತೇನೆ. ನನಗೆ ನಿನ್ನ ಸಹಾಯವೂ ಬೇಕು" ಎಂದು ಆ ದೊಡ್ಡ ಮನುಷ್ಯ ಮುಖ್ಯವಾದ ಸಮಾಚಾರವನ್ನು ಹೀಗೆ ಹೇಳಿದನು:

ಆ ಮನುಷ್ಯನ ಹೆಸರು ವರಾಹಸ್ವಾಮಿ. ಅವನ ತಾತ ಸಮುದ್ರ ವ್ಯಾಪಾರ ಮಾಡುತ್ತ ಅಪರಿಮಿತವಾಗಿ ಹಣ ಸಂಪಾದಿಸಿದ್ದರು. ಒಂದುಸಾರಿ ಅವರು ಭಾರಿ ಹಣದ ಮೊತ್ತದೊಂದಿಗೆ ಹಿಂದಿರುಗಿ ಬರುತ್ತ, ಅರ್ಧರಾತ್ರಿ ಹೊತ್ತಿಗೆ ಈ ಸತ್ರದಲ್ಲಿ ತಂಗಿದ್ದರು. ಆ ರಾತ್ರಿಯಲ್ಲಿ ಸತ್ರದ ಮೇಲೆ ದರೋಡೆಕೋರರು ಮುಗಿಬಿದ್ದು, ತಡೆದವರನ್ನೆಲ್ಲಾಕೊಂದು ಸಿಕ್ಕಿದುದನ್ನೆಲ್ಲಾ ದೋಚಿಕೊಂಡು ಓಡಿಹೋದರು. ಸತ್ತವರ ಗುಂಪಿನಲ್ಲಿ ವರಾಹಸ್ವಾಮಿಯ ತಾತನೂ ಇದ್ದರು.

ಆಮೇಲೆ ವರಾಹಸ್ವಾಮಿಯ ತಂದೆ ಚಿಲ್ಲರೆ ವ್ಯಾಪಾರವನ್ನು ಮಾಡುತ್ತ, ಹೇಗೋ ವರಾಹ

ಎಂ. ಕೆ. ಈಶ್ವರರಾವ್



ಸ್ವಾಮಿಯನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡಿ, ಇತ್ತೀಚೆಗಷ್ಟೇ ತೀರಿ ಹೋಗಿದ್ದರು.

ತಂದೆ ಸಾಯುವ ಕಾಲಕ್ಕೆ ವರಾಹಸ್ವಾಮಿಗೆ ಒಂದು ಮನೆಯ ಹೊರತು ಮತ್ತೇನೂ ಉಳಿದಿರಲಿಲ್ಲ. ಆ ಮನೆಯನ್ನು ಮಾರಿ ಬಿಡೋಣವೆಂದು ವರಾಹಸ್ವಾಮಿ ಅಟ್ಟದ ಮೇಲಿದ್ದ ಹಳೆಯ ಸಾಮಾನುಗಳನ್ನೆಲ್ಲಾ ತೆಗೆದು ಒತ್ತರೆ ಮಾಡುವಾಗ, ಅವನ ತಾತನಿಗೆ ಸಂಬಂಧಿಸಿದ ಪುಸ್ತಕವೊಂದು ಸಿಕ್ಕಿತು. ಅದರಲ್ಲಿ ಒಂದು ಕಡೆ ತಾತ ಹೀಗೆ ಬರೆದಿದ್ದರು ;

"ನಾನು ತಂಗಿದ ಸತ್ರವನ್ನು ದರೋಡೆಕೋರರು ಸುತ್ತಲೂ ಮುತ್ತಿಗೆ ಹಾಕಿದರು. ನನ್ನ ಹತ್ತಿರವಿದ್ದ ಹಣದ ಪೆಟ್ಟಿಗೆಯನ್ನು, ಸತ್ರದ ಹಿಂದೆ ಯಾವುದೋ ಗಿಡಗಳನ್ನು ನೆಡಲು ತೋಡಲ್ಪಟ್ಟ ಹೊಂಡದಲ್ಲಿಟ್ಟು ಮಣ್ಣು ಮುಚ್ಚಿ ಹುಗಿದು ಬಿಟ್ಟೆನು. ಪೆಟ್ಟು ತಿಂದು ಏಳಲಾಗದೆ ಬಿದ್ದಿರುವ ನಾನು ಹೆಚ್ಚು ಹೊತ್ತು ಬದುಕಲಾರೆ."

ಚಂದ್ರಣ್ಣನೊಂದಿಗೆ ವರಾಹಸ್ವಾಮಿ ಈ ಮಾತುಗಳನ್ನೆಲ್ಲಾ ಹೇಳಿ, "ಈಗ ನಾವು ಸತ್ರದ ಹಿಂದಿರುವ ಮರಗಳ ಬುಡದಲ್ಲಿ ಆ ನಿಧಿಗಾಗಿ ಅಗೆದು ಹುಡುಕಬೇಕು. ನೀನೂ ಸಹಾಯಮಾಡಿದರೆ ನಿನಗೂ ಮೂರನೇ ಒಂದಂಶ ಕೊಡುತ್ತೇನೆ" ಎಂದನು

ಚಂದ್ರಣ್ಣ ಆ ನಿಬಂಧನೆಗೆ ಸಂತೋಷದಿಂದ ಒಪ್ಪಿಕೊಳ್ಳುತ್ತ, "ಹಾಗಾದರೆ ಈ ಹೆಂಚಿನ ತುಂಡುಗಳನ್ನು ತುಂಬಿಸಿಕೊಂಡು ಬಂದಿರೇಕೋ?" ಎಂದು ಕೇಳಿದನು.

"ಇದ್ದಕ್ಕಿದ್ದ ಹಾಗೆ ನಾವು ಬಿಂದಿಗೆಯನ್ನು ತೆಗೆದುಕೊಂಡು ಹೋಗುವಾಗ ಯಾರಿಗಾದರೂ ಅನುಮಾನವಾದೀತು. ದಿನಾ ಈ ಬಿಂದಿಗೆ ನಮ್ಮೊಂದಿಗಿದ್ದರೆ ಯಾರೂ ಅದನ್ನು ಗಮನಿಸಲಾರರು. ಬೇಕಾದರೆ ಪೆಟ್ಟಿಗೆಯಲ್ಲಿದ್ದ ಹಣವನ್ನು ಈ ಬಿಂದಿಗೆಯೊಳಗೇ ತುಂಬಿಸಿಕೊಂಡು ಹೋಗಬಹುದು. ಅಷ್ಟರೊಳಗೆ ಯಾರಾದರೂ ಅನುಮಾನಪಟ್ಟು ಬಿಂದಿಗೆಯನ್ನು ಎಳೆದುಕೊಂಡು ಹೋದರೂ ಇದರಲ್ಲಿ ಹೆಂಚಿನ ತುಂಡುಗಳೇ ಇರುತ್ತವೆ. ಅಗೆಯುವ ಕೆಲಸ ಒಂದೇ ದಿನದಲ್ಲಿ ಮುಗಿಯುವುದೆಂದು ಕಾಣುವುದಿಲ್ಲವಷ್ಟೆ?" ಎಂದನು ವರಾಹಸ್ವಾಮಿ.

ಒಳ್ಳೇ ಉಪಾಯವೆಂದುಕೊಂಡು ಚಂದ್ರಣ್ಣನು ಬಂಡಿಯ ಕುದುರೆಯನ್ನು ಬಿಚ್ಚಿ ಒಂದು ಮರಕ್ಕೆ ಕಟ್ಟಿ, ವರಾಹಸ್ವಾಮಿಯೊಂದಿಗೆ ತಾನೂ ಅಗೆಯತೊಡಗಿದನು. ಒಬ್ಬೊಬ್ಬರು ಒಂದೊಂದು ಗಿಡದ ಬುಡದಲ್ಲಿ ಅಗೆಯಲು ಪ್ರಾರಂಭಿಸಿದರು.

ಬೆಳಂಜಾವದ ಹೊತ್ತಿಗೆ ಅಗೆಯುವುದನ್ನು ನಿಲ್ಲಿಸಿ, ಮರುದಿನ ರಾತ್ರಿ ಮತ್ತೆ ಬರಲು ನಿಶ್ಚಯಿಸಿದರು. ಮೊದಲನೇ ರಾತ್ರಿ ಅವರ ಪ್ರಯತ್ನಕ್ಕೆ ಫಲಿತವೇನೂ ಸಿಗಲಿಲ್ಲ. ತೆಗೆದ ಹೊಂಡಗಳನ್ನು ಮತ್ತೆ ಮಣ್ಣು ತುಂಬಿಸಿ ಮುಚ್ಚಿ, ಗುದ್ದಲಿಗಳನ್ನೂ ಹಾರೆಗಳನ್ನೂ ಒಂದು ದೊಡ್ಡ ಪೊದರಿನೊಳಗೆ ಅಡಗಿಸಿಟ್ಟು, ಇಬ್ಬರೂ ಜಡಕಾ ಬಂಡಿಯಲ್ಲಿ ಹಿಂದಿರು

ಗಿದರು. ಚಂದ್ರಣ್ಣ ವರಾಹ ಸ್ವಾಮಿಯನ್ನು ಅವನ ಮನೆಯ ಹತ್ತಿರ ಇಳಿಸಿ ತನ್ನ ಮನೆ ಸೇರುವಾಗ ಬೆಳಗಾಯಿತು.

"ರಾತ್ರಿ ಪೂರಾ ಎಲ್ಲಿದ್ದಿರಿ?" ಎಂದು ಚಂದ್ರಣ್ಣನ ಹೆಂಡತಿ ಕಾಮಾಕ್ಷಿ ಅವನನ್ನು ಕೇಳಿದನು.

ಚಂದ್ರಣ್ಣ ಹೆಂಡತಿಯೊಂದಿಗೆ ನಡೆದ ಸಮಾಚಾರ ವನ್ನೆಲ್ಲಾ ಮರೆಮಾಜದೆ ಹೇಳಿ, "ಈ ಸಮಾಚಾರ ಎಲ್ಲಿಯೂ ಹೇಳಿಬಿಡಬೇಡ ಮತ್ತೆ! ನಾನು ಮಧ್ಯಾಹ್ನದ ಮೇಲೆ ಹೋಗಿ ಆ ಸತ್ರದ ಹಿಂದೆ ಇನ್ನೂ ಕೆಲವು ಕಡೆ ಅಗೆಯುತ್ತೇನೆ. ಆ ಪಾಳು ಸತ್ರಕ್ಕೆ ಹಗಲು ಹೊತ್ತು ಕೂಡಾ ಯಾರೂ ಬರುವು ದಿಲ್ಲ. ಹಿಂದೆ ಎಂದೋ ಗುಂಪು ಗುಂಪಾಗಿ ಸತ್ತವರೆಲ್ಲ ಅಲ್ಲಿ ಪಿಶಾಚಿಗಳಾಗಿದ್ದಾರೆಂದು ಹೇಳುತ್ತಾರಷ್ಟೆ? ಆ ಭಯ ನನಗಿಲ್ಲಬಿಡು." ಎಂದನು.

"ಇದು ಅನ್ಯಾಯ. ನಮಗೆ ಅನ್ಯಾಯದ ಹಣ ಬೇಡ." ಎಂದಳು ಕಾಮಾಕ್ಷಿ. ಆದರೆ ಚಂದ್ರಣ್ಣ ಹೆಂಡತಿಯ ಮಾತನ್ನು ಕೇಳದೆ ಮಧ್ಯಾಹ್ನ ತಿರುಗು ತ್ತಲೇ ಆ ಪಾಳು ಸತ್ರಕ್ಕೆ ಹೋಗಿ ಕತ್ತಲೆಯಾಗುವ ವರೆಗೂ ಮತ್ತೆ ಕೆಲವು ಸ್ಥಳಗಳಲ್ಲಿ ಅಗೆದು, ಏನೂ ಸಿಕ್ಕದೆ ಆ ಹೊಂಡಗಳ ಜಾಡು ತಿಳಿಯದಂತೆ ಮುಚ್ಚಿ ಮನೆಗೆ ಹಿಂದಿರುಗಿದನು.

ಆ ರಾತ್ರಿ ಮತ್ತೆ ಚಂದ್ರಣ್ಣನು ವರಾಹಸ್ವಾಮಿ ಯೊಂದಿಗೆ ಆ ಸತ್ರಕ್ಕೆ ಹೋಗಿ ಇಬ್ಬರೂ ಅಗೆದರು. ಹೀಗೆ ಎರಡು ವಾರಗಳ ವರೆಗೆ ಇಬ್ಬರೂ ಶ್ರಮ ಪಟ್ಟರು. ಆದರೆ ಚಂದ್ರಣ್ಣ ಹಗಲೂ ರಾತ್ರೀ ಶ್ರಮ ಪಡುವವನಾದುದರಿಂದ ನಿದ್ರಾಹಾರ ಸರಿಯಾಗಿಲ್ಲದೆ ತುಂಬಾ ಹೈರಾಣಾಗಿ ಹೋದನು. ಮರುದಿನ ಬೆಳಿಗ್ಗೆ ಅವನಿಗೆ ಸ್ವಲ್ಪ ಜ್ವರವೂ ಬಂತು.

"ಈ ರಾತ್ರಿ ನಾನು ಬಂಡಿಕಟ್ಟಲಾರೆ." ಎಂದು ಚಂದ್ರಣ್ಣ ನೆರೆಮನೆಯ ಪುಣ್ಯಪ್ಪನೊಂದಿಗೆ ವರಾಹ ಸ್ವಾಮಿಗೆ ಸುದ್ದಿ ಕಳುಹಿಸಿದನು. ಪುಣ್ಯಪ್ಪ ಹಿಂದಿರುಗಿ



ಬಂದು, "ವರಾಹ ಸ್ವಾಮಿಯ ಮನೆಯಲ್ಲಿ ಯಾರೂ ಇಲ್ಲ. ಆತ ಮನೆ ಖಾಲಿಮಾಡಿ ಪಟ್ಟಣಕ್ಕೆ ಹೊರಟು ಹೋದನಂತೆ" ಎಂಬ ಸಂಗತಿಯನ್ನು ತಿಳಿಸಿದನು.

ಆ ಮಾತು ಕೇಳಿ ಚಂದ್ರಣ್ಣನಿಗೆ ತಲೆ ತಿರುಗಿ ದಂತಾಯಿತು. ವರಾಹಸ್ವಾಮಿ ಪಟ್ಟಣಕ್ಕೆ ಕುಟುಂಬದ ಸಹಿತ ಹೋದನೆಂದರೆ, ಅವನಿಗೆ ನಿಧಿ ಸಿಕ್ಕಿಬಿಟ್ಟಿದೆ ಯೆಂದೇ ಆಯಿತು! ಕಳೆದ ರಾತ್ರಿ ಹಿಂದಿರುಗಿ ಬರುವಾಗ ಬಿಂದಿಗೆಯಲ್ಲಿ ಹೆಂಚಿನ ತುಂಡುಗಳಿಗೆ ಬದಲಾಗಿ ಧನವನ್ನು ತುಂಬಿಸಿಕೊಂಡಿದ್ದಾನೆಂದು ಅರ್ಥವಾಗುತ್ತದೆ! ತನ್ನನ್ನು ವರಾಹಸ್ವಾಮಿ ಎಷ್ಟು ಘೋರವಾಗಿ ಮೋಸಮಾಡಿದ! ಅವನು ಎಲ್ಲಿಗೆ ಹೋದನೆಂದು ತಿಳಿಯಲೇ ಬೇಕೆಂಬ ತವಕದಲ್ಲಿ ಅವನು, ಆ ಜ್ವರದಲ್ಲಿಯೇ ಬೀಳುತ್ತ ಏಳುತ್ತ ವರಾಹಸ್ವಾಮಿಯ ಮನೆಗೆ ಹೋದನು.

ವರಾಹಸ್ವಾಮಿಯ ಮನೆಗೆ ಬೀಗ ಹಾಕಲ್ಪಟ್ಟಿತ್ತು. ಪಕ್ಕದ ಮನೆಯ ಜಗಲಿಯಲ್ಲಿ ಕುಳಿತಿದ್ದ ಒಬ್ಬ

ಮುದುಕನನ್ನು ನೋಡಿ, ವರಾಹಸ್ವಾಮಿ ಎಲ್ಲಿಗೆ ಹೋದನೆಂದು ವಿಚಾರಿಸಿದನು. ಅದಕ್ಕೆ ಆ ಮುದುಕನು, "ವರಾಹಸ್ವಾಮಿಯೋ! ಅವನಿಗೆ ಹುಚ್ಚು ತುಂಬಾ ತಲೆಗೇರಿ ಹೋಯಿತು. ಮನೆಯವರು ಅವನಿಗೆ ಚಿಕಿತ್ಸೆಮಾಡಿಸಲು ಕೈಕಾಲು ಕಟ್ಟಿ ಪಟ್ಟಣಕ್ಕೆ ಸಾಗಿಸಿಕೊಂಡು ಹೋದರು. ಅಲ್ಲಿ ಎಲ್ಲಿಯೋ ಹುಚ್ಚನ್ನು ಸರಿಮಾಡುವ ದೊಡ್ಡ ವೈದ್ಯರಿದ್ದಾರಂತೆ!" ಎಂದನು.

ಈ ಮಾತು ಚಂದ್ರಣ್ಣನಿಗೆ ಇನ್ನೊಂದು ಗಾಬರಿಯ ಪೆಟ್ಟು! "ಏನು! ವರಾಹಸ್ವಾಮಿಗೆ ಹುಚ್ಚೇ?" ಎಂದು ಕೇಳಿದನು.

"ಹುಚ್ಚಲ್ಲದೆ ಮತ್ತೇನು? ತಾತ ನಿಧಿಯನ್ನು ಅಡಗಿಸಿದ್ದಾನೆ ಅಂತ ಮನೆಯೊಳಗೆಲ್ಲಾ ಅಗೆದು ಹಾಕಿದನು. ಹಗಲೆಲ್ಲಾ ಅದೇ ಕೆಲಸ! ರಾತ್ರಿ ಎಲ್ಲಿಗೋ ಹೋಗೋದು! ಯಾವ ಪಿಶಾಚಿಯ ಬಳಿಗೋ? ಕಡೆಗೂ ಒಂದು ನಿಧಿ ಬಿಂದಿಗೆ ಸಿಕ್ಕಿತಂತೆ. ಅದರಲ್ಲಿ ಹೆಂಚಿನ ತುಂಡುಗಳ ಹೊರತು ಮತ್ತೇನಿಲ್ಲವಂತೆ. ಅಂತೂ ಹುಚ್ಚು ತುಂಬಾ ಬೆಳೆದುಬಿಟ್ಟಿತು. ಅವನ ಹೆಂಡತಿಯೇ ಅವನನ್ನು ಮದ್ದು ಮಾಡಿಸಲು ಕರೆದುಕೊಂಡು ಹೋದಳು ಪಾಪ!" ಎಂದನು ಮುದುಕ.

ಚಂದ್ರಣ್ಣನಿಗೆ ಎಲ್ಲಾ ಅರ್ಥವಾಯಿತು. ಆ ಹುಚ್ಚನನ್ನು ನಂಬಿ ತಾನು ಕೂಡಾ ಹೊಂಡಕ್ಕೆ ಬಿದ್ದೆನಲ್ಲ! ಆತನ ಹುಚ್ಚೇ ತನಗೂ ಅಂಟಿತಲ್ಲಾ? ಹಣ ಎಂಥವನ್ನಾದರೂ ಹುಚ್ಚನನ್ನಾಗಿ ಮಾಡುತ್ತದೆ!

ಅಂತೂ ಚಂದ್ರಣ್ಣನ ಮನಸ್ಸು ಹಗುರಾಗಿ, ಕಾಲೆಳೆದುಕೊಳ್ಳುತ್ತ ತನ್ನ ಮನೆಗೆ ಸೇರಿಕೊಂಡನು.

ಅವನು ಆ ಮುದುಕನ ಬಳಿಯಿಂದ ಮನೆಗೆ ಹಿಂದಿರುಗಿದ ಕೂಡಲೇ ಅಲ್ಲಿ ಜಗಲಿಯ ಕಂಬದ ಹಿಂದೆ ಅಡಗಿದ್ದ ಚಂದ್ರಣ್ಣನ ಹೆಂಡತಿ ಕಾಮಾಕ್ಷಿ ಈಚೆಗೆ ಬಂದು ಮುದುಕನೊಂದಿಗೆ, "ಕ್ಷಮಿಸಿ ತಾತಾ! ನಿಮ್ಮಿಂದ ಸುಳ್ಳು ಹೇಳಿಸಿಬಿಟ್ಟೆ" ಎಂದಳು.

"ಹೌದೂ, ವರಾಹಸ್ವಾಮಿಗೆ ತಾತನ ನಿಧಿ ಸಿಕ್ಕಿ, ಇಲ್ಲಿ ಎಲ್ಲರ ಸಾಲಗಳನ್ನೂ ತೀರಿಸಿ, ಪಟ್ಟಣಕ್ಕೆ ಹೊರಟು ಹೋದನಲ್ಲಾ? ಅವನಿಗೆ ಹುಚ್ಚು ಎಂದು ಏಕೆ ಹೇಳಲು ಹೇಳಿದಿಯಮ್ಮಾ?" ಎಂದು ಕೇಳಿದನು ಮುದುಕ.

ಕಾಮಾಕ್ಷಿ ನಡೆದ ಸಂಗತಿಯನ್ನು ಮುದಕನೊಂದಿಗೆ ಹೇಳಿ, "ಹಾಗೆ ಹೇಳದೇ ಇದ್ದರೆ ನನ್ನ ಗಂಡನಿಗೆ ನಿಜವಾಗಿಯೂ ಹುಚ್ಚು ಹಿಡಿಯುತ್ತಿತ್ತು. ಈ ನಿಧಿಯ ಮಾತು ಬರುವವರೆಗೂ ತಾನು ಸಂಪಾದಿಸುವುದರಲ್ಲಿ ಸಂತೋಷವಾಗಿದ್ದವನಿಗೆ, ನಿಧಿದಾಹ ಹುಟ್ಟಿದ ಮೇಲೆ ಇನ್ನೆಲ್ಲಿಯ ಸುಖಶಾಂತಿ? ಅದಕ್ಕೇ ನಿಮ್ಮನ್ನು ಹಾಗೆ ಹೇಳಲು ಹೇಳಿದೆ" ಎಂದು ಹೇಳಿ ಮತ್ತೊಂದು ದಾರಿಯಿಂದ ಬೇಗನೆ ಮನೆಗೆ ಹೋದಳು.



# ಅರ್ಧ ಧರ್ಮ ಪ್ರಭು

ಒಂದು ದಿನ ಜಯಸಿಂಹನೆಂಬ ರಾಜನ ದರ್ಬಾರಿಗೆ ಒಬ್ಬ ಬಡವನು ಬಂದು ತನ್ನ ದೀನ ಸ್ಥಿತಿಯನ್ನು ಹೇಳಿಕೊಂಡು ಬದುಕುವ ದಾರಿ ತೋರಿಸುವಂತೆ ಕೇಳಿದನು. ರಾಜನು ಅವನಿಗೆ ಸ್ವಲ್ಪ ಬಂಜರು ಭೂಮಿಯನ್ನು ಕೊಡಿಸಿದನು.

ತರುವಾಯ ಒಂದು ದಿನ ರಾತ್ರಿ ಜಯಸಿಂಹ ರಾಜನೂ, ಮಂತ್ರಿಯೂ ವೇಷ ಪಲ್ಲಟಿಸಿಕೊಂಡು ತಿರುಗುತ್ತ ಆ ಬಡವನ ಮನೆಯ ಹತ್ತಿರ ಬಂದು, ಅಂಗಳದಲ್ಲಿದ್ದ ಮಂಚದ ಮೇಲೆ ಕುಳಿತಿದ್ದ ಆತನನ್ನು ಮಾತಾಡಿಸಿದರು.

ಅವನು ಮರ್ಯಾದೆಯಿಂದ ಎದ್ದು ಅವರನ್ನು ಮಂಚದಲ್ಲಿ ಕೂಡಿಸಿ, ಉಪಚರಿಸಿ ಅವರು ಯಾರು ಏನೆಂದು ವಿಚಾರಿಸಿದನು.

"ಈ ದೇಶದ ರಾಜನೊಂದಿಗೆ ಏನಾದರೂ ಸಹಾಯ ಕೇಳಬೇಕೆಂದು ಬಂದೆವು. ರಾಜನು ಹೇಗೆ? ಧರ್ಮದಾತನೇನಾ?" ಎಂದು ಮಂತ್ರಿ ವಿಚಾರಿಸಿದನು.

ಬಡವನು ರಾಜನು ತನಗೆ ಮಾಡಿದ ಸಹಾಯವನ್ನು ಕುರಿತು ವಿವರವಾಗಿ ಹೇಳಿ, "ಹೀಗೆ ನಮ್ಮ ರಾಜನು ಅರ್ಧ ಧರ್ಮ ಪ್ರಭು!" ಎಂದನು.

"ನಿಮಗೆ ಜೀವನದ ದಾರಿಯನ್ನು ತೋರಿಸಿದ ರಾಜನು ಅರ್ಧ ಧರ್ಮ ಪ್ರಭು ಹೇಗದು?" ಎಂದು ಮಂತ್ರಿ ಅವನನ್ನು ಕೇಳಿದನು.

"ಅಯ್ಯಾ, ನಾನು ಸಾಹಸ ಮಾಡಿ ರಾಜನ ದರ್ಬಾರಿಗೆ ಹೋಗಿ ನನ್ನ ಗೋಳು ಆತನಿಗೆ ಅರ್ಥವಾಗುವ ಹಾಗೆ ಹೇಳಲು ಸಾಮರ್ಥ್ಯ ಪಡೆದೇ ಅಲ್ಲಿ. ಅಂತಲೇ ನನಗೆ ಭೂಮಿ ಸಿಕ್ಕಿತು. ನನ್ನ ಹಾಗೆ ದಾರಿದ್ರ್ಯ ಅನುಭವಿಸುವವರು ಇನ್ನೆಷ್ಟು ಮಂದಿ ಇಲ್ಲ? ಅವರೆಲ್ಲರಿಗೂ ರಾಜನ ಇದಿರಿಗೆ ಹೋಗುವಷ್ಟು ಧೈರ್ಯ ವಿದ್ದೀತೆ? ತಮ್ಮ ಕಷ್ಟ ಹೇಳಿಕೊಳ್ಳುವ ಸಾಮರ್ಥ್ಯವಿದ್ದೀತೇ? ರಾಜನು ಪೂರ್ತಿ ಧರ್ಮ ಪ್ರಭುವಾಗಿದ್ದರೆ ಎಲ್ಲರ ಕಷ್ಟಗಳನ್ನೂ ತಾನಾಗಿ ತಿಳಿದುಕೊಂಡು, ಸಾಗುವಳಿ ಇಲ್ಲದೆ ಬಿದ್ದಿರುವ ಭೂಮಿಯನ್ನು ದಾನ ಮಾಡುತ್ತಿದ್ದನಷ್ಟೇ?" ಎಂದನು ಆ ಬಡವ.

ಮತ್ತೊಂದು ವಾರದೊಳಗೆ ರಾಜನು ಅನೇಕ ಸಾವಿರ ಮಂದಿ ಬಡ ಬಗ್ಗರಿಗೆ ಭೂದಾನವನ್ನು ಮಾಡಿ, ಪೂರ್ತಿ ಧರ್ಮಪ್ರಭು ಎನಿಸಿಕೊಂಡನು.





# ಮೋಸದಮಾತಿನಮಲ್ಲ

ಮಹಾದೇವಪುರವೆಂಬ ಊರಿನಲ್ಲಿ ಶಂಕರಯ್ಯ ನೆಂಬೊಬ್ಬ ಜೇನಸಿನ ವ್ಯಾಪಾರಿ ಇದ್ದನು. ಅಲ್ಲಿರುವ ಬೇರೆ ವ್ಯಾಪಾರಸ್ಥರಿಗಿಂತಲೂ ಶಂಕರಯ್ಯ ಬಹಳ ಘಾಟೀ. ಅವನು ಸಾಮಾನುಗಳಲ್ಲಿ ಕಲಬೆರಿಕೆ ಮಾಡಿಯೇ ವ್ಯಾಪಾರಮಾಡುತ್ತಿದ್ದರೂ, ತನ್ನ ವಾಕ್ಚಾತುರ್ಯದಿಂದ ಜನರನ್ನು ಸುಲಭವಾಗಿ ನಂಬಿಸಿಬಿಡುತ್ತಿದ್ದನು. ಅಂತಲೇ ಅವನಿಗೆ ನಷ್ಟವೆಂಬ ವಿಷಯವೇ ತಿಳಿಯದು. ಅಪ್ಪಿತಪ್ಪಿ ಯಾರಾದರೂ ಶಂಕಿಸಿದರೂ ಶಂಕರಯ್ಯ ತನ್ನ ಮಾತುಗಳ ನಯ ವಿನಯ ಲೇಪನಗಳಿಂದ ಅವರೇ ತಪ್ಪಿರಬೇಕೆಂಬ ಅನುಮಾನವನ್ನುಂಟುಮಾಡಿ, ಅವರನ್ನು ತೆಪ್ಪಗೆ ಇರಿಸುತ್ತಿದ್ದನು.

ಅವನ ಮಾತಿನ ಮೋಡಿಗೆ ಸಿಕ್ಕಿ ಬೀಳದವರೆಂದರೆ ಪಟೇಲ ರುದ್ರಯ್ಯನವರೊಬ್ಬರೇ ಎಂದು ಹೇಳಬಹುದು. ಕಾರಣವೇನೆಂದರೆ ಮೋಸಗಾರರಲ್ಲೇ ಮಾತಿನ ಚಮತ್ಕಾರವಿರುತ್ತದೆಂದು ಅವರ ಅನುಭವ. ಆದುದರಿಂದ ಶಂಕರಯ್ಯನು ಕಲಬೆರಕೆಯ ವ್ಯಾಪಾರವನ್ನೇ ಮಾಡುತ್ತಿರಬೇಕೆಂದು ಪಟೇಲ ರುದ್ರಯ್ಯನವರಿಗೆ ಆಗಾಗ ಅಸ್ಪಷ್ಟ ಆಧಾರ ಕಂಡುಬರುತ್ತಿದ್ದುವು. ಆದರ ನಿಜವನ್ನು ತಿಳಿಯಲಿಕ್ಕಾಗಿ ಅವರು ಉಪಾಯವನ್ನು ಆಲೋಚನೆಮಾಡಲು ತೊಡಗಿದರು. ಆಧಾರವಿಲ್ಲದೆ ಯಾರನ್ನೂ ಹಿಡಿಯಲು ಸಾಧ್ಯವಿಲ್ಲವಷ್ಟೆ?

ಕಡೆಗೆ ಒಂದು ದಿನ ಪಟೇಲ ರುದ್ರಯ್ಯ ತುಪ್ಪ ಕೊಂಡುಕೊಳ್ಳುವ ನೆವನದಲ್ಲಿ ಶಂಕರಯ್ಯನ ಅಂಗಡಿಗೆ ಹೋದರು.

ಅವರಿಗೆ ಬೇಕಾದುದೇನೆಂದು ಕೇಳಿ, ಶಂಕರಯ್ಯ ಒಳಗೆ ಹೋಗಿ, ತುಪ್ಪದಲ್ಲಿ ಮುಳುಗಿಸಿ ಎತ್ತಿದ ಮೂರು ಬೆರಳುಗಳೊಂದಿಗೆ ಹೊರಗೆ ಬಂದು, ರುದ್ರಯ್ಯನಿಗೆ ಒಂದೊಂದೇ ಬೆರಳನ್ನು ತೋರಿಸುತ್ತ, "ನೋಡಿರಿ ಸ್ವಾಮಿ. ಇದು ಅಪ್ಪಟ ದನದ ತುಪ್ಪ. ನನ್ನ ಹತ್ತಿರವಿರುವ ಅತ್ಯುತ್ತಮ ಮೊದಲನೇ ರಕದ್ದು. ಇದು ಎರಡನೇ ರಕಂ. ಮೊದಲನೇದರಷ್ಟು ಶ್ರೇಷ್ಠವೆನ್ನಲಾರೆನಾದರೂ ಮೊದಲನೇ ರಕಂನಂತೆಯೇ ಇರುತ್ತೆ. ಇನ್ನಿದು ಮೂರನೇ ಬಗೆಯದು. ಇದನ್ನು ಕುರಿತು ಹೆಚ್ಚಿಗೆ ಹೇಳುವ ಅಗತ್ಯವೇ ಇಲ್ಲ. ಕಡಿಮೆ ದರದಲ್ಲಿ ಒಳ್ಳೇ ತುಪ್ಪ ಬೇಕು ಅಂತ ಬರುತ್ತಾರೆ ನೋಡಿ, ಅವರಿಗಾಗಿಯೇ ಇದು. ನೋಡಿ ಹೇಳಿರಿ

ಕೆ. ಬಿ. ದತ್ತ

ಸ್ವಾಮಿ. ತಮಗೆ ಯಾವ ಬಗೆಯದನ್ನು ಕೊಡಲಿ ? ಎಷ್ಟುಬೇಕು ?" ಎಂದು ಕೇಳಿದನು.

ಮೂರು ಬಗೆಯ ತುಪ್ಪಗಳನ್ನೂ ಪರೀಕ್ಷಿಸಿದ ಪಟೇಲ ರುದ್ರಯ್ಯ, ಅವುಗಳ ನಡುವೆ ವ್ಯತ್ಯಾಸ ವೇನಿಲ್ಲವೆಂದು ತಿಳಿದುಕೊಂಡು, ಬೆಲೆಯೂ ದುಬಾರಿ ಯಾಗಿರುವುದನ್ನು ನೋಡಿ, ತಮ್ಮ ಅಭಿಪ್ರಾಯ ವನ್ನೇ ಶಂಕರಯ್ಯನೊಂದಿಗೂ ಹೇಳಿದರು.

"ಹಾಗೇನೂ ಇಲ್ಲ ಸ್ವಾಮಿ. ಮೂರು ಬಗೆಯ ತುಪ್ಪಗಳನ್ನೂ ಮೂರು ಬೇರೆ ಬೇರೆ ಪಾತ್ರಗಳಲ್ಲಿ ಇರಿಸಿದ್ದೇನೆ. ಅನುಮಾನವಿದ್ದರೆ ತಾವೇ ಒಳಗೆ ಬಂದು ನೋಡಬಹುದಲ್ಲ? " ಎಂದನು ಶಂಕರಯ್ಯ.

"ಅದೇನಿಲ್ಲಪ್ಪಾ. ಇಷ್ಟು ವರ್ಷಗಳಿಂದ ಈ ಊರಲ್ಲೇ ಇರುವವನಾಯಿತಲ್ಲ ನೀನು? ನಿನ್ನ ಮೇಲೆ ಅನುಮಾನವೆಂದರೇನು ಶಂಕರಯ್ಯಾ? " ಎಂದು ಹೇಳಿ ಪಟೇಲರುದ್ರಯ್ಯ, ಮೂರನೇ ಬಗೆಯ ತಪ್ಪ ವನ್ನು ಸ್ವಲ್ಪ ಕೊಂಡುಕೊಂಡು ಹೊರಟುಹೋದರು. ನಿಜಕ್ಕೂ ಶಂಕರಯ್ಯನ ಹತ್ತಿರ ಇದ್ದುದು ಒಂದೇ ಬಗೆಯ ತುಪ್ಪ ಮಾತ್ರ. ಆ ತುಪ್ಪವನ್ನೇ ಅವನು ಮೂರು ಬೆರಳುಗಳಲ್ಲಿ ಅದ್ದಿ ತೋರಿಸಿದ್ದ. ಹೀಗೆ ತೋರಿಸಿ ಅವರು ಯಾವುದನ್ನು ಕೊಂಡುಕೊಂಡರೂ ತನ್ನ ಗರಿಷ್ಠ ಪರಿಮಿತಿಯ ಲಾಭಕ್ಕೆ ಯಾವ ಕೊರತೆಯೂ ತಟ್ಟದಂತೆ ಬೆಲೆಯನ್ನು ನಿರ್ಣಯಿ ಸಿಡುತ್ತಿದ್ದನು. ಈ ಮೋಸವು ಗೊತ್ತಾಗದ ಕಾರಣ ದಿಂದ ಯಾರೂ ಶಂಕರಯ್ಯನ ಪ್ರಾಮಾಣಿಕತೆಯನ್ನು ಶಂಕಿಸುತ್ತಿರಲಿಲ್ಲ.

ಮಾರಣೇ ದಿನ ಶಂಕರಯ್ಯ ಪಟೇಲರುದ್ರಯ್ಯ ನವರ ಬಳಿಗೆ ಗಾಬರಿಯಿಂದ ಬಂದು, "ಸ್ವಾಮಿ! ನಿನ್ನೆ ರಾತ್ರಿ ನನ್ನ ಅಂಗಡಿಗೆ ಕಳ್ಳರು ನುಗ್ಗಿದರು. ದಯಮಾಡಿ ತಾವು ಹೇಗಾದರೂ ಮಾಡಿ ಕಳ್ಳನನ್ನು ಹಿಡಿಯಿಸಿ ಹೋದ ಸರಕುಗಳೆಲ್ಲಾ ತಿರುಗಿ ಬರುವ ಹಾಗೆ ಮಾಡಬೇಕು " ಎಂದು ಬೇಡಿಕೊಂಡನು.

"ಹಾಗೇನು! ಎಲಯೆಲಾ! ನೋಡೋಣ. ನಿಜವಾದ ಕಳ್ಳನನ್ನು ಹಿಡಿಯಲು ಪ್ರಯತ್ನಿಸುತ್ತೇನೆ. ಕಳ್ಳತನವಾಯಿತೆಂದರೆ ಸುಮ್ಮನೆ ಬಿಡಲಾದೀತೇ ?



ಹೌದೂ, ನಿನ್ನ ಅಂಗಡಿಯಿಂದ ಏನೇನು ವಸ್ತುಗಳು ಹೋದುವೆಂದು ಹೇಳಲಿಲ್ಲವಲ್ಲಾ? " ಎಂದು ಪಠೇಲ ರುದ್ರಯ್ಯ ಕೇಳಿದರು.

" ಒಂದು ಅಕ್ಕೀಚೀಲ. ಒಂದು ತೊಗರೀ ಬೇಳೆಗೋಣಿ. ಒಂದು ತುಪ್ಪದ ಪಾತ್ರೆ, ಕೆಲವು ತೂಕದ ಕಲ್ಲುಗಳು ಕೂಡಾ ಹೋಗಿವೆ ಸ್ವಾಮಿ! ತಾವು ಹೇಗಾದರೂ ಅವೆಲ್ಲಾ ತಿರುಗಿ ಬರುವ ಹಾಗೆ ಮಾಡಬೇಕು ಸ್ವಾಮಿ! " ಎಂದು ಶಂಕರಯ್ಯ ಅಂಗಲಾಚಿಕೊಂಡನು.

" ಉಳಿದ ಸರಕುಗಳೆಲ್ಲ ಹಾಗೇ ಇವೆಯೇನು? " ಎಂದು ಪಠೇಲರು ಕೇಳಿದರು.

" ಉಳಿದ ಸರಕುಗಳೆಲ್ಲಾ ಇದ್ದ ಜಾಗದಲ್ಲೇ ಇವೆ, ತಾವು ಒಂದುಸಾರಿ ಅಂಗಡೀವರೆಗೆ ಪಾದಬೆಳೆಸಿ ಪರಿಶೀಲಿಸಿದರೆ ಒಳ್ಳೇದು " ಎಂದು ಶಂಕರಯ್ಯ ಅವರನ್ನು ಆಹ್ವಾನಿಸಿದನು.

" ನಡಿ, ಹೋಗೋಣ " ಎಂದು ರುದ್ರಯ್ಯನವರು ಅಂಗಿ ಹಾಕಿಕೊಂಡು ಹೊರಟರು. ಶಂಕರಯ್ಯನ ಅಂಗಡಿಯಲ್ಲಿರುವ ಸರಕುಗಳನ್ನೆಲ್ಲಾ ಪರಿಶೀಲಿಸಿ ಪಠೇಲ ರುದ್ರಯ್ಯ " ಹೌದೂ, ಶಂಕರಯ್ಯಾ, ನಿನ್ನ ಅಂಗಡಿಯಲ್ಲಿ ಮೂರು ಬಗೆಯ ತುಪ್ಪದ ಪಾತ್ರ ಗಳಿವೆಯೆಂದು ನಿನ್ನೆ ನನ್ನ ಹತ್ತಿರ ಹೇಳಿದೆಯಲ್ಲಾ? ಒಂದು ಕಳ್ಳರು ಎತ್ತಿಕೊಂಡು ಹೋದರೆ ಇನ್ನೆರಡು ತುಪ್ಪದಪಾತ್ರಗಳು ಎಲ್ಲಿವೆ? ಇಲ್ಲಿ ಎಲ್ಲಿಯೂ ಕಾಣುವುದಿಲ್ಲವೇಕೆ? " ಎಂದು ಪ್ರಶ್ನಿಸಿದರು.

ಶಂಕರಯ್ಯನ ಕಂಠದೊಳಗೆ ಹಸೀಬೇಲದಕಾಯಿ ಸಿಕ್ಕಿಕೊಂಡ ಹಾಗಾಯಿತು. ಅವನು ತಡಬಡಿಸುತ್ತ " ಅದು—ಅದು " ಎಂದು ಏನೋ ಹೇಳಲು ಪ್ರಯತ್ನಿಸಿದನು. ಪಠೇಲ ರುದ್ರಯ್ಯ ಅವನನ್ನು ತಡೆದು, ಗಂಭೀರ ಕಂಠದಿಂದ, " ಶಂಕರಯ್ಯಾ! ಎಲ್ಲರನ್ನೂ ಎಷ್ಟುಕಾಲವೆಂದು ಮೋಸಮಾಡಿ ಜೀವಿಸ ಬಲ್ಲೆ? ನಿನ್ನ ಮೇಲೆ ಬಹಳ ದಿನಗಳಿಂದ ಅನುಮಾನ ಪಡುತ್ತಾ ಇದ್ದೆ. ನಾನು ನನಗಿರುವ ಅಧಿಕಾರದ ರೀತಿಯಲ್ಲಿ ನಿನ್ನೆ ರಾತ್ರಿ ಅಂಗಡಿಯೊಳಗಿನ ಸ್ವಲ್ಪ ಸರಕುಗಳನ್ನು ಮಾತ್ರ ತರಿಸಿ ಆ ಗ್ರಾಮ ಪಂಚಾಯಿತೀ ಕೊಟ್ಟಾರದಲ್ಲಿ ಇರಿಸಿದ್ದೇನೆ. ಅಕ್ಕಿ ತೊಗರಿಬೇಳೆಗಳು ಕೂಡಾ ಕಲಬೆರಕೆಯಾಗಿವೆ. ಅಷ್ಟೇ ಅಲ್ಲ, ನಿನ್ನ ತೂಕದ ಕಲ್ಲುಗಳಲ್ಲಿಯೂ ಮೋಸವಿದೆಯೆಂದು ನಿರೂಪಿಸಲಾಗಿದೆ. ಇದರಿಂದ ಇನ್ನಿರುವ ಸರಕು ಗಳನ್ನೂ ನಂಬಲಾಗುವುದಿಲ್ಲ. ಎಲ್ಲವನ್ನೂ ಪರೀಕ್ಷೆ ಮಾಡಿಸಿ ಅದಕ್ಕೆಲ್ಲಾ ಸೇರಿ ನೀನು ಜುಲುಮಾನೆ ಶಿಕ್ಷೆಗೆ ಗುರಿಯಾಗಿರುವುದು ಮಾತ್ರವಲ್ಲದೆ, ಈ ಊರಿನಲ್ಲಿ ನೀನು ವ್ಯಾಪಾರ ಮಾಡುವ ಹಕ್ಕನ್ನೂ ಕಳೆದುಕೊಂಡಿರುವಿ! " ಎಂದು ಹೇಳಿ, ಅಲ್ಲಿಂದ ಹೊರಟು ಹೋದರು.





# ದೇವೀಭಾಗವತ

ಇಂದ್ರನನ್ನು ನಿರ್ಮೂಲಿಸಲೇಬೇಕೆಂದು ತಂದೆ ಗಟ್ಟಿಯಾಗಿ ಹೇಳಿದ ಮೇಲೆ, ವೃತ್ರನು ರಥದ ಮೇಲೇರಿ ಹೊರಟನು. ಅವನ ಹಿಂದೆ ದೊಡ್ಡ ಸೇನೆಯೂ ಹೊರಟಿತು. ವೃತ್ರನೆಂಬ ಆ ಅದ್ಭುತ ರಾಕ್ಷಸನು ಬಹು ದೊಡ್ಡ ಬಲದೊಂದಿಗೆ ಯುದ್ಧಕ್ಕೆ ಬರುವುದನ್ನು ನೋಡಿ, ಇಂದ್ರನೂ ಸಿದ್ಧನಾದನು.

ಇಂದ್ರನಿಗೂ ವೃತ್ರನಿಗೂ ದೊಡ್ಡ ಯುದ್ಧವು ಪ್ರಾರಂಭವಾಯಿತು. ಇಬ್ಬರೂ ಸೋಲಿನ ಪರಿವೆ ಕಾಣದೆ ಹೋರಾಡ ತೊಡಗಿದರು. ಕಡೆಗೆ ವೃತ್ರನು ಇಂದ್ರನನ್ನು ಹಿಡಿದು ಬಾಯಿಯೊಳಗಿಟ್ಟುಕೊಂಡನು.

ಅದನ್ನು ನೋಡಿ ದೇವತೆಗಳು ಒಂದೇ ಸಮನೆ ಆಕ್ರೋಶಿಸುತ್ತ ಇಂದ್ರನ ಬಿಡುಗಡೆಗೆ ಏನು ದಾರಿ ಎಂದು ಬೃಹಸ್ಪತಿಯೊಂದಿಗೆ ಮೊರೆಯಿಟ್ಟುಕೊಂಡರು.

"ನಾನು ಮಾತ್ರ ಏನು ತಾನೇ ಹೇಳಲಿ? ನನ್ನಿಂದ ಏನುಮಾಡಲೂ ಸಾಧ್ಯವಿಲ್ಲ. ಬಾಯಿಯೊಳಗಿದ್ದರೂ ಹೊಟ್ಟೆಯೊಳಗಿದ್ದರೂ ಇಂದ್ರನು ಸಾಯಲಾರನು. ಅವನು ವೃತ್ರನ ಬಾಯಿಯಲ್ಲಿ ಜೀವದೊಂದಿಗೇ ಇದ್ದಾನೆ. ಇದು ಅವನು ತಾನಾಗಿಯೇ ತಂದುಕೊಂಡ ಕೇಡು." ಎಂದನು ಬೃಹಸ್ಪತಿ.

ಕಡೆಗೆ ಅವರೆಲ್ಲ ಕೂಡಿ ಮಹಾಶಕ್ತಿಯೊಂದನ್ನು ಸೃಷ್ಟಿಸಿ ಆವಳಿಗೆ ಜೃಂಭಿಕಾ ಎಂದು ಹೆಸರಿಟ್ಟರು. ದೇವತೆಗಳ ಕೋರಿಕೆಯಂತೆ ಜೃಂಭಿಕಾ ವೃತ್ರನನ್ನು ಆವರಿಸಿ ಅವನಿಗೆ ಭಾರೀ ಆಕಳಿಕೆ ಬರುವಂತೆ ಮಾಡಿದಳು. ವೃತ್ರನು ದೊಡ್ಡದಾಗಿ ಬಾಯಿ ತೆರೆದಾಗ, ಇಂದ್ರನು ಹೊರಕ್ಕೆ ಹಾರಿ ತಪ್ಪಿಸಿಕೊಂಡನು.

ಆ ಮೇಲೆ ಬಿಡದೆ ವೃತ್ರೇಂದ್ರರೊಳಗಿನ ಯುದ್ಧವು ಮತ್ತೆ ಪ್ರಾರಂಭವಾಯಿತು. ಕಟ್ಟಕಡೆಗೆ ಇಂದ್ರನು ಸಂಪೂರ್ಣವಾಗಿ ಸೋತು ಅಮರಾವತಿಯನ್ನು ಬಿಟ್ಟು ಕೊಟ್ಟು ದಿಕ್ಕಿಲ್ಲದವನಾಗಿ ಓಡಿದನು. ವೃತ್ರನು ಅಮರಾವತಿಯನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಯ ಒಡೆಯನಾದನು.

ತನ್ನ ಮಗನು ಸ್ವರ್ಗಲೋಕದ ರಾಜನಾದುದನ್ನು ನೋಡಿ ತ್ವಷ್ಟೃವಿಗೆ ತುಂಬಾ ಸಂತೋಷವಾಯಿತು. ಎಲ್ಲಾ ಬಗೆಯ ಯಜ್ಞಭಾಗಗಳೂ ವೃತ್ರಾಸುರನ

೧೮. ವೃತ್ರನ ವಧೆ



ಕಡೆಯವರಿಗೇ ಆಗಿ, ದೇವತೆಗಳೆಲ್ಲ ಗತಿಗಾಣದೆ ಕಾಡು ಮೇಡುಗಳಲ್ಲಿ ತಿರುಗ ತೊಡಗಿದರು. ದೇವ ನಗರವಾಗಿದ್ದ ಸ್ವರ್ಗಲೋಕ ರಾಕ್ಷಸ ನಗರವಾಯಿತು.

ಎಷ್ಟು ಕಾಲ ಈಗತಿ? ಎಲ್ಲಾ ದೇವತೆಗಳೂ ಪರಸ್ಪರ ಮಾತಾಡಿ ಒಂದು ನಿರ್ಣಯಕ್ಕೆ ಬಂದು ಶಿವನ ಬಳಿಗೆ ಹೋಗಿ ತಮ್ಮ ಗೋಳನ್ನು ತೋಡಿ ಕೊಂಡರು. "ಶಿವ ಶಿವಾ! ನೀನೇ ಗತಿ! ನಿನಗೇ ಶರಣಾಗತರಾಗಿದ್ದೇವೆ" ಎಂದು ಎಲ್ಲಾ ದೇವತೆಗಳು ಆಕ್ರಂದನ ಮಾಡಿದರು.

ಶಿವನು ಸಾಧಾರಣ ಭಾವದಲ್ಲಿಯೇ ಆ ದೇವತೆ ಗಳೊಂದಿಗೆ, "ಬನ್ನಿ, ನಾವೆಲ್ಲಾ ಬ್ರಹ್ಮನನ್ನು ಕರೆದು ಕೊಂಡು ವಿಷ್ಣುವಿನ ಬಳಿಗೆ ಹೋಗೋಣ. ಆತ ನಿಂದಲೇ ವೃತ್ರನ ಸಂಹಾರವಾಗುವಂತೆ ನೋಡ ಬೇಕು." ಎಂದನು.

ಮತ್ತೇನು? ಎಲ್ಲರೂ ಕೂಡಿ ವಿಷ್ಣು ನಿವಾಸ ವಾದ ವೈಕುಂಠಕ್ಕೆ ಹೋದರು. ಅವರನ್ನೆಲ್ಲಾ ನೋಡಿ ವಿಷ್ಣು, "ನೀವೆಲ್ಲಾ ಒಟ್ಟಿಗೆ ಸೇರಿ ಬಂದಿದ್ದೀರಲ್ಲಾ? ಏನು ವಿಶೇಷವೋ?" ಎಂದು ಪ್ರಶ್ನೆಮಾಡಿದನು.

ಯಾರು ಮೊದಲು ಏನು ಹೇಳುವುದೆಂದು ತೋರದೆ ಎಲ್ಲರೂ ಸುಮ್ಮನಿದ್ದರು. ಅವರು ಚಿಂತೆ ಯಲ್ಲಿರುವುದನ್ನು ಅರಿತು ವಿಷ್ಣುವೇ ಪುನಃ "ನಿಮಗೆ ಬಂದ ಕಷ್ಟವೇನೆಂದು ಹೇಳಿದರೆ ಅದಕ್ಕೆ ತಕ್ಕ ಪರಿಹಾರಮಾಡುತ್ತೇನೆ. ಹೇಳಿರಿ" ಎಂದನು.

ವೃತ್ರಾಸುರನಿಂದ ಇಂದ್ರನಿಗೆ ಬಂದ ಕಷ್ಟವನ್ನು, ದೇವತೆಗಳು ಗತಿ ತಪ್ಪಿ ಹೋಗಿ, ಪ್ರಪಂಚದ ಕ್ರಮವೂ ತಪ್ಪುವ ಅಪಾಯವನ್ನು ಕುರಿತು ಬ್ರಹ್ಮನೂ ಶಿವನೂ ಹೇಳಿದರು. ಅದನ್ನೆಲ್ಲಾ ಕೇಳಿ ವಿಷ್ಣು ಅವರೊಂದಿಗೆ ಹೀಗೆಂದನು:

"ನಿಜ ನಿಜ. ನಿಮಗೆಲ್ಲಾ ಎಂತಹ ಕಷ್ಟ ಬಂದಿದೆ ಎಂದು ನನಗೆ ಗೊತ್ತಿದೆ. ವೃತ್ರನನ್ನು ಯಾವುದಾದರೂ ಮೋಸದಿಂದಲೇ ಕೊಲ್ಲಬೇಕಾಗಿದೆ. ಅದಕ್ಕೆ ತಕ್ಕ ಉಪಾಯವನ್ನು ಆಲೋಚಿಸಿ ಹೇಳುತ್ತೇನೆ. ಬ್ರಹ್ಮ ನಿಂದ ಪಡೆದ ವರಗಳ ಮಹಿಮೆಯಿಂದ ಯಾರಿಂದಲೂ ಸಾವಿಲ್ಲದಂತೆ ಮದಿಸಿ ನಿರಂಕುಶನಾಗಿ ಪ್ರವರ್ತಿ ಸುತ್ತಿದ್ದಾನೆ ಆ ವೃತ್ರ. ನೀವು ಹೇಗಾದರೂ ಮಾಡಿ ವೃತ್ರನಿಗೂ ಇಂದ್ರನಿಗೂ ಸ್ನೇಹವಮಾಡಿಸಿಬಿಡಿ. ನಾನು ವಜ್ರಾಯುಧದಲ್ಲಿ ಅದೃಶ್ಯನಾಗಿದ್ದು ನಿಮಗೆ ಸಹಾಯ ಮಾಡುತ್ತೇನೆ. ಎಂತಹ ಕಪಟದಿಂದ ಅವನನ್ನು ಸ್ನೇಹಕ್ಕೆ ಒಪ್ಪಿಸಲು ಸಾಧ್ಯವೋ ಅಂತಹ ಕಪಟವನ್ನೇ ಪ್ರಯೋಗಿಸಿರಿ. ಹೇಗಾದರೂ ಅವನನ್ನು ನಂಬಿಸಿರಿ. ಅಷ್ಟುಮಾತ್ರ ನೀವು ನಿಮ್ಮ ವಾಗ್ಜಾಲದಿಂದ ಮಾಡಿ ಬಿಟ್ಟರೆ ಸಾಕು. ಆ ಮೇಲೆ ಇಂದ್ರನು ಅವನನ್ನು ಉಪಾಯವಾಗಿ ಕೊಂದುಬಿಡುತ್ತಾನೆ. ಅದರಿಂದ ತಪ್ಪೇನಿಲ್ಲ. ನಾನು ಮೊದಲು ಮೋಸಗಳನ್ನು ಮಾಡಲಿಲ್ಲವೆ? ವಾಮನನ ರೂಪದಲ್ಲಿ ಹೋಗಿ ಬಲಿಯನ್ನು ಮೋಸಪಡಿಸಿದ್ದೇನೆ. ಮೋಹಿನಿ ರೂಪದಲ್ಲಿ ದಾನವರನ್ನು ಮೋಸಪಡಿಸಿದ್ದೇನೆ.



ದೊಡ್ಡ ಕೆಡುಕನ್ನು ಕೆಡಹಲು ಈ ಬಗೆಯ ಮೋಸಗಳನ್ನು ಮಾಡಲೇ ಬೇಕಾಗುತ್ತದೆ. ಇನ್ನೊಂದು ಮುಖ್ಯ ವಿಷಯ. ಸಮಸ್ತ ಕೋರಿಕೆಗಳನ್ನೂ ತೀರಿಸುವಂಥವಳಾದ ಜಗಜ್ಜನನಿಯನ್ನು ಮೊದಲು ಪ್ರಾರ್ಥನೆ ಮಾಡಿ ಒಲಿಸಿಕೊಳ್ಳಿರಿ. ಅವಳು ತನ್ನ ಯೋಗ ಮಾಯೆಯಿಂದ ಸಹಾಯಮಾಡದಿದ್ದರೆ ಅವನನ್ನು ಮೋಸಪಡಿಸಲು ಸಾಧ್ಯವಿಲ್ಲ. ಅವಳ ಮಾಯೆಗೆ ಒಳಪಟ್ಟು ವೃತ್ರನು ಇಂದ್ರನೊಂದಿಗೆ ಸ್ನೇಹಮಾಡಿ, ಅವನ ಕೈಯಲ್ಲಿ ಸಾಯುತ್ತಾನೆ. ಹೀಗೆ ನೀವೆಲ್ಲರೂ ಸೇರಿ ಜಗಜ್ಜನನಿಯ ಸಹಾಯ ಪಡೆಯಿರಿ."

ವಿಷ್ಣು ಹೇಳಿದಂತೆ ದೇವತೆಗಳು ಕಲ್ಪವೃಕ್ಷಗಳಿಂದ ಕೂಡಿದ ಮೇರುಪರ್ವತದ ಮೇಲೆ ಹೋಗಿ ಮಹಾದೇವಿಯನ್ನು ಧ್ಯಾನಮಾಡ ತೊಡಗಿದರು. "ಓ ಜಗಜ್ಜನನೀ! ಈ ಮೊದಲು ನೀನು ನಮಗೆ ಸಹಾಯ ಮಾಡಿ ಮಹಿಷಾಸುರನನ್ನೂ, ಶುಂಭ ನಿಶುಂಭರನ್ನೂ, ಇತರ ರಾಕ್ಷಸರನ್ನೂ ಸಂಹಾರಮಾಡಿರುವೆ. ತಾಯೇ! ಈ ವೃತ್ರನು ನಿನಗೂ ಶತ್ರುವೇ ಆಗಿರಬೇಕು. ಇಲ್ಲದಿದ್ದರೆ ನಿನ್ನ ಭಕ್ತರಾದ ನಮ್ಮನ್ನು ಹೀಗೆ ಹಿಂಸೆಗೊಳಿಸುತ್ತಿದ್ದನೇ?" ಎಂದು ಪ್ರಾರ್ಥಿಸಿಕೊಂಡರು.

ಅವರ ದೈನ್ಯತೆಯನ್ನೂ ಪ್ರಾರ್ಥನೆಯನ್ನೂ ಕೇಳಿ ದೇವಿ ಕನಿಕರಗೊಂಡು, ಸಕಲಾಭರಣಧಾರಿಣಿಯಾಗಿ, ಮೂರು ಕಣ್ಣುಗಳುಳ್ಳವಳಾಗಿ, ನಾಲ್ಕು ಕೈಗಳೊಂದಿಗೆ, ದಿವ್ಯಾಯುಧಗಳನ್ನು ಹಿಡಿದು ರಕ್ತಚಂದನದ ರಂಗಿನ ವಸ್ತ್ರಗಳನ್ನು ಧರಿಸಿಕೊಂಡು ಪ್ರತ್ಯಕ್ಷಳಾದಳು.

ಅನಂತರ ದೇವತೆಗಳ ಕೋರಿಕೆಯಂತೆ ಅವರಿಗೆ ಸಹಾಯಮಾಡುತ್ತೇನೆಂದು ಮಾತುಕೊಟ್ಟು, ಮಹಾದೇವಿ ಅಂತರ್ಧಾನಳಾದಳು. ದೇವತೆಗಳು ಕೃತಕೃತ್ಯರಾದ ಆನಂದದಲ್ಲಿ, ಇಂದ್ರನಿಗೂ ವೃತ್ರನಿಗೂ ಸ್ನೇಹ ಮಾಡಿಸುವ ಭಾರವನ್ನು ಮುನಿಗಳಿಗೆ ಒಪ್ಪಿಸಿದರು.

ಅದರಂತೆ ಮುನಿಗಳು ವೃತ್ರನ ಬಳಿಗೆ ಹೋಗಿ, ಕುಶಲ ವಿಚಾರಿಸಿ ಹೊಗಳಿ ಮಾತು ಪ್ರಾರಂಭಿಸಿ, "ನೋಡಯ್ಯಾ ವೃತ್ರಾ! ನೀನು ಎಷ್ಟು ಯೋಗ್ಯನಾದವನೋ ಅಷ್ಟೇ ಯೋಗ್ಯತೆ ಇಂದ್ರನಿಗೂ ಇದೆ, ಹಾಗಿರುವಾಗ ನೀವಿಬ್ಬರೂ ಸ್ನೇಹವಾಗಿದ್ದರೆ ಕೇಳುವುದೇನಿದೆ? ಇಂದ್ರನು ನಿನ್ನೊಡನೆ ಸ್ನೇಹ ಪ್ರಮಾಣಕ್ಕೆ ಸಿದ್ಧನಾಗಿದ್ದಾನೆ. ನೀನು ಕೂಡಾ ಹಾಗೇ ಮಾಡಿಬಿಡು. ಮುನಿಗಳಾದ ನಾವೇ ನಿಮ್ಮ ಸ್ನೇಹ ಸಂಬಂಧಕ್ಕೆ ಮಧ್ಯವರ್ತಿಗಳಾಗಿರುತ್ತೇವೆ. ವಿರೋಧಿಯನ್ನು ವಿರೋಧಿಯಾಗಿಯೇ ತಿರುಗಿಸಿಕೊಂಡಿರುವುದು ಒಳ್ಳೆಯದಲ್ಲ. ಪ್ರಪಂಚ ಕ್ಷೇಮಕ್ಕೂ ಕೆಡುಕೇ, ಸ್ನೇಹವಾಗಿದ್ದರೆ ನಿಮ್ಮಿಬ್ಬರ ಪ್ರಯೋಜನಗಳಿಂದ ಪ್ರಪಂಚಕ್ಕೆ ಮೇಲೇ ಆಗುತ್ತದೆ. ವ್ಯವಹಾರದಲ್ಲಿ ಶತ್ರು, ಮಿತ್ರ, ಯುದ್ಧ, ಸೋಲು, ಸ್ನೇಹ, ಸಂಧಿ ಎಲ್ಲವೂ ಸಹಜವೇ" ಎಂದರು.

ಅದಕ್ಕೆ ವೃತ್ರನು, "ಅವರವರ ದ್ರೋಹ ಅವರವರನ್ನೇ ಮುಳುಗಿಸುತ್ತದೆ. ಹಾಗಂತ ನಿಮ್ಮ ಮಾತನ್ನು ಮೀರಿ ನಡೆಯಲಿಕ್ಕೂ ಮನಸ್ಸು ಬರುವು



ದಿಲ್ಲ. ಏಕೆಂದರೆ ನೀವು ಲೋಕಹಿತಚಿಂತಕರಾದ ಮುನಿಗಳು. ಆದರೂ ಪಾಪಾತ್ಮನೂ, ಬ್ರಹ್ಮ ಹಂತಕನೂ ಆದ ಇಂದ್ರನನ್ನು ಹೇಗೆ ನಂಬಲಿ? ಮಹಾ ಸ್ವಾರ್ಥಿ ಬೇರೆ!" ಎಂದನು ವೃತ್ರ.

"ನೀನು ಹೇಳಿದಂತೆ ಅವರವರ ದ್ರೋಹ ಅವರವರನ್ನೇ ಮುಳುಗಿಸುತ್ತದೆ. ಬ್ರಹ್ಮಹತ್ಯಾಪಾತಕಕ್ಕೂ, ಕಳ್ಳು ಕುಡಿದ ಪಾಪಕ್ಕೂ ಪ್ರಾಯಶ್ಚಿತ್ತವಾದರೂ ಇದೆ. ಆದರೆ ಮಿತ್ರದ್ರೋಹಕ್ಕೆ ಪ್ರಾಯಶ್ಚಿತ್ತವಿಲ್ಲವಲ್ಲ? ಆದುದರಿಂದ ಸ್ನೇಹಪ್ರಮಾಣಮಾಡಿದ ಮೇಲೆ ಇಂದ್ರನು ಪ್ರಮಾಣ ಮುರಿಯಲಾರ! ನಿಃಸಂಶಯದಿಂದ ಸ್ನೇಹಪ್ರಮಾಣ ಮಾಡಿಕೊಳ್ಳಿರಿ." ಎಂದರು ಮುನಿಗಳು.

"ಒದ್ದೆಯಿಂದಾಗಲೀ, ಒಣಗಿದುದರಿಂದಾಗಲೀ, ಕಲ್ಲಿನಿಂದಾಗಲೀ, ಕೋಲಿನಿಂದಾಗಲೀ, ಕಠಿಣವಾದ ವಜ್ರದಿಂದಾಗಲೀ, ಹಗಲಲ್ಲೋ, ರಾತ್ರಿಯಲ್ಲೋ ಯಾವ ದೇವತೆಗಳೋ, ಆ ದೇವತೆಗಳ ನಾಯಕ ಇಂದ್ರನೋ ನನ್ನನ್ನು ಕೊಲ್ಲಕೂಡದು. ಈ ನಿಬಂಧನೆಗಳಿಗೆ ಅಭ್ಯಂತರವಿಲ್ಲದಿದ್ದರೆ, ನಿಮ್ಮ ಇಚ್ಛೆಯಂತೆ ನಡೆಸಬಹುದು" ಎಂದನು ವೃತ್ರ.

ಮುನಿಗಳು ಈ ಮಾತನ್ನು ಒಯ್ದು ಇಂದ್ರನಿಗೆ ತಲಪಿಸಿದರು. ಇಂದ್ರನು ಆ ನಿಬಂಧನೆಗಳಿಗೆ ಒಪ್ಪಿದನು. ಆಮೇಲೆ ನಿರ್ವಿಘ್ನವಾಗಿ ಅಗ್ನಿಸಾಕ್ಷಿಯಾಗಿ ಇಂದ್ರವೃತ್ರರೊಳಗೆ ಸ್ನೇಹಬಂಧನವಾಯಿತು. ಅಂದಿನಿಂದ ಇಬ್ಬರೂ ಸ್ನೇಹದಿಂದ ಕೂಡಿ ತಿರುಗಾಡಲಾರಂಭಿಸಿದರು. ಸಮುದ್ರತೀರದಲ್ಲಿಯೂ, ನಂದನವನದಲ್ಲಿಯೂ ಸಂಚಾರ ಮಾಡಿದರು, ಇಂದ್ರನ ನಡವಳಿಕೆಗಳನ್ನು ನೋಡಿ ವೃತ್ರನಿಗೆ ತೃಪ್ತಿಯಾಯಿತು. ಆದರೆ ಇಂದ್ರನು ಮಾತ್ರ ವೃತ್ರನನ್ನು ಕೊಲ್ಲುವ ಅವಕಾಶಕ್ಕಾಗಿ ಹೊಂಚುತ್ತ ತಕ್ಕ ಕ್ಷಣಗಳನ್ನು ಎಣಿಸಿಕೊಂಡೇ ಇದ್ದನು.

ತನ್ನ ಮಗನು ಇಂದ್ರನೊಂದಿಗೆ ಸ್ನೇಹ ಮಾಡಿಕೊಂಡು ತಿರುಗಾಡುವನೆಂಬ ಸಮಾಚಾರ ತ್ವಷ್ಟೃವಿಗೆ ಗೊತ್ತಾಯಿತು. ಅವನು ಅತ್ಯಾಶ್ಚರ್ಯದಿಂದ ಮಗನನ್ನು ನೋಡಲು ಬಂದು ವೃತ್ರನೊಂದಿಗೆ ಹೀಗೆಂದನು:

"ಏನಿದು ಮಗನೇ! ಆ ಮೋಸಗಾರ ಇಂದ್ರನನ್ನು ನೀನು ಹೇಗೆ ನಂಬಿದೆ? ಎಲ್ಲರೂ ನಮ್ಮ ಹಾಗಿನವರೇ ಅಂದುಕೊಳ್ಳುವುದು ಬಹಳ ತಪ್ಪು. ಎಂತಹ ಹುಚ್ಚನಾದರೂ ಶತ್ರುವನ್ನು ನಂಬುತ್ತಾನೆಯೇ? ಅದರ ಮೇಲೆ ಅವಕಾಶ ಸಿಕ್ಕಿದಾಗ ನಂಬಿಕೆಯನ್ನು ಭಂಗಿಸುವುದರಲ್ಲಿ ಹೆಸರುಹೋದವನು ಇಂದ್ರ! ಅವನು ಧರ್ಮನ್ಯಾಯಗಳಿಗೆ ಕಟ್ಟು ಬೀಳುವುದುಂಟೇನೋ?"

ಈ ರೀತಿಯಾಗಿ ತಂದೆ ಎಷ್ಟೇ ಬೋಧಿಸಿದರೂ ಕಾಲ ಮೂಡಿಬಂದ ವೃತ್ರನ ತಲೆಗೆ ಏರಲಿಲ್ಲ. ಮಹಾದೇವಿಯ ಮಾಯೆಯೇ ಅಂತಹುದು!

ಒಂದು ದಿನ ಸಂಧ್ಯಾಕಾಲದ ವೇಳೆಯಲ್ಲಿ ಇಂದ್ರನೂ ವೃತ್ರನೂ ಸಮುದ್ರತೀರದಲ್ಲಿ ತಿರುಗಾಡು



ತ್ತಿದ್ದರು. ಅದು ರಾತ್ರಿಯೂ ಅಲ್ಲ, ಹಗಲೂ ಅಲ್ಲ. ಅಷ್ಟುಮಾತ್ರವಲ್ಲದೆ ವೃತ್ರನು ಒಬ್ಬಂಟಿಗನಾಗಿದ್ದಾನೆ. ಇವನನ್ನು ಕೊಲ್ಲಲು ಇದೇ ತಕ್ಕ ಸಮಯ, ಎಂದುಕೊಂಡು ಇಂದ್ರನು ವಿಷ್ಣುವನ್ನು ಧ್ಯಾನಿಸಿದನು. ವಿಷ್ಣು ಬಂದು ಅದೃಶ್ಯರೂಪದಲ್ಲಿ ವಜ್ರಾಯುಧದೊಳಗೆ ಪ್ರವೇಶಿಸಿದನು. ಇಂದ್ರನಿಗೆ ಸಮುದ್ರದಲ್ಲಿರುವ ನೊರೆಗಳು ಕಂಡುಬಂದುವು. ಅವು ಒದ್ದೆಯೂ ಅಲ್ಲ, ಒಣಗಿದುವೂ ಅಲ್ಲ. ಯಾವ ವಿಧವಾದ ಆಯುಧವೂ ಅಲ್ಲ ಅವುಗಳು. ಇಂದ್ರನು ದೇವಿಯನ್ನು ಧ್ಯಾನಿಸಿಕೊಂಡನು. ಅವಳು ತನ್ನ ಅಂಶವನ್ನು ಆ ನೊರೆಗಳಲ್ಲಿ ಪ್ರವೇಶಗೊಳಿಸಿದಳು, ಇಂದ್ರನು ತನ್ನ ವಜ್ರಾಯುಧವನ್ನು ತೊಳೆಯುವವನಂತೆ ಆ ನೊರೆಗಳಿಂದ ಮುಚ್ಚಿ ವೃತ್ರನ ಮೇಲೆ ಬಲವಾಗಿ ಬೀಸಿ ಎಸೆದನು. ಆ ಪೆಟ್ಟಿಗೆ ವೃತ್ರನು ಪರ್ವತ ಒಡೆದುಬಿದ್ದಂತೆ ಬಿದ್ದು ಪ್ರಾಣಬಿಟ್ಟನು.

ಹೀಗೆ ಇಂದ್ರನ ಶತ್ರುಭಯವು ತೀರಿಹೋಯಿತು. ಅವನು ಎಲ್ಲಾ ದೇವತೆಗಳೊಂದಿಗೆ ಸ್ವರ್ಗದಲ್ಲಿರುವ ಉಳಿದ ರಾಕ್ಷಸರನ್ನೆಲ್ಲಾ ಓಡಿಸಿ ಅಮರಾವತಿಯ ಸಿಂಹಾಸನವನ್ನು ಸ್ವಾಧೀನಪಡಿಸಿಕೊಂಡನು. ದೇವತೆಗಳಿಂದಲೂ, ಮುನಿಗಳಿಂದಲೂ ಹೊಗಳಿಸಿಕೊಂಡು, ಇಂದ್ರನು ದೇವಿಯನ್ನು ಮರೆಯದೆ ಮಹಾ ಉತ್ಸವ ಮಾಡಿಸಿ ಪೂಜಿಸಿದನು. ತನ್ನ ನಂದನವನದಲ್ಲಿ ಮಹಾ ದೇವಿಗಾಗಿ ದಿವ್ಯವಾದ ಆಲಯವನ್ನು ಕಟ್ಟಿ ಪ್ರತಿಷ್ಠೆ ನಡೆಸಿದನು. ಅನಂತರ ತನಗೆ ಸಹಾಯಮಾಡಿದ ವಿಷ್ಣುವನ್ನೂ ಎಲ್ಲಾ ದೇವತೆಗಳೊಂದಿಗೆ ಕೂಡಿ ಪೂಜಿಸಿದನು. ವೃತ್ರನನ್ನು ಕೊಂದವರು ವಿಷ್ಣುವೂ ದೇವಿಯೂ ಇಂದ್ರನೂ ಕೂಡಿಯೇ ಆದರೂ ಅದರ ಕೀರ್ತಿ ಇಂದ್ರನಿಗೇ ಇರಲೆಂದನು ವಿಷ್ಣು.

ಅದೆಲ್ಲಾ ಮುಗಿದ ಮೇಲೆ ಇಂದ್ರನಿಗೆ ತಾನು ಮಿತ್ರದ್ರೋಹಮಾಡಿದೆನೆಂದು ದಿಗಿಲು ಹುಟ್ಟಿತು. ಈ ಪಾತಕದಲ್ಲಿ ತಮಗೂ ವಿಷ್ಣುವಿಗೂ ಭಾಗವಿರುವುದನ್ನು ನೆನೆದು ಮುನಿಗಳು ಕೂಡಾ ಭಯಪಟ್ಟರು. ತಾವು ಮಾಡಿದ ಕೆಲಸಕ್ಕೆ ಮುನಿಗಳು ಪಶ್ಚಾತ್ತಾಪಪಡುತ್ತ ತಮ್ಮ ಆಶ್ರಮಗಳಲ್ಲಿ ಬಾಡಿದವರಾಗಿದ್ದರು.

ಕಡೆಗೂ ತನ್ನ ಇನ್ನೊಬ್ಬ ಮಗನೂ ಸತ್ತುಹೋದುದನ್ನು ನೋಡಿ ತ್ವಷ್ಟೃ ತುಂಬಾ ದುಃಖದಿಂದ ಮಗನಿಗೆ ಉತ್ತರ ಕ್ರಿಯೆಗಳನ್ನು ಮಾಡಿದನು. ಮೋಸದಿಂದ ವೃತ್ರನನ್ನು ಕೊಂದ ಇಂದ್ರನು ಕಷ್ಟದಲ್ಲೇ ಬೀಳಲೆಂದು ಶಪಿಸಿದನು.

ಆ ಶಾಪದಿಂದಾಗಿ ವೃತ್ರನನ್ನು ಕೊಂದ ಅನಂತರ ಇಂದ್ರನ ತೇಜಸ್ಸು ಮಂಕಾಗಿಹೋಯಿತು. "ಇಂದ್ರನು ಕೃತಘ್ನ" ಎಂದು ದೇವತೆಗಳೇ ಹೇಳಿಕೊಳ್ಳತೊಡಗಿದರು. ಅವನ ಮೇಲೆ ದೇವತೆಗಳಿಗೆ ಗೌರವ ಇಳಿಯಿತು. ಸ್ವಾರ್ಥಕ್ಕಾಗಿ ಪ್ರಮಾಣಗಳನ್ನೆಲ್ಲವನ್ನೂ ಗಾಳಿಗೆ ಹಾರಿಸಿ ಮಿತ್ರಘಾತಕನಾದ ಇಂದ್ರನಿಗೆ ಸಮಾನರಾದವರು ಮೂರು ಲೋಕಗಳಲ್ಲಿಯೂ ಇನ್ನೊಬ್ಬರಿಲ್ಲವೆಂದು ದೇವತೆಗಳು ವ್ಯಂಗ್ಯವಾಗಿ



ಮಾತಾಡಿಕೊಳ್ಳ ತೊಡಗಿದರು. ಮಾನವ ಲೋಕದಲ್ಲಿಯೂ ಇಂದ್ರನ ಅಪಖ್ಯಾತಿ ಹರಡಿತು.

ಕಡೆಗೆ ಇಂದ್ರನು ಸಭೆಯಲ್ಲಿ ಮುಖ ತೋರಿಸಲು ನಾಚಿ, ಒಳಗೊಳಗೇ ಕುದಿಯುತ್ತ ಮನೆಯ ಮೂಲೆಯಲ್ಲಿ ಕುಳಿತಿರುವುದನ್ನು ನೋಡಿ ಅವನ ಹೆಂಡತಿ ಶಚೀದೇವಿ, "ಇದೇನಿದು? ಶತ್ರುಭಯವು ನೀಗಿ ಹೋದರೂ ಸುಖಸಂತೋಷವಿಲ್ಲವೇಕೆ? ಅಂತಹ ಶತ್ರು ಬೇರೆ ಯಾರಾದರೂ ಇರುವ ಹಾಗೆ ಕಾಣುವುದಿಲ್ಲವಲ್ಲಾ?" ಎಂದು ಕೇಳಿದಳು.

ಇಂದ್ರನು ಶಚೀದೇವಿಯನ್ನು ನೋಡಿ, "ನನಗೆ ಈಗ ಹಿಡಿದಿರುವುದು ಶತ್ರುಭಯವೇನಲ್ಲ. ಬ್ರಹ್ಮಹತ್ಯಾ ಪಾತಕದ ಭಯ! ಇಲ್ಲಿಯ ನಂದನವನವೂ ಅಮೃತವೂ, ಗಂಧರ್ವ ಗಾನವೂ, ಅಪ್ಸರಸಿಯರ ನೃತ್ಯವೂ, ನೀನೂ, ಇತರ ಸ್ತ್ರೀಯರೂ, ಕಾಮಧೇನುವೂ, ಕಲ್ಪವೃಕ್ಷವೂ ಯಾವುದೂ ನನಗೆ ಈಗ ಸುಖಸಂತೋಷವೀಯಲಾರದು!" ಎಂದನು.

ಕಡೆಗೆ ಇಂದ್ರನು ಸ್ವರ್ಗದಲ್ಲಿರಲಾರದೆ, ಮಾನಸ ಸರೋವರದ ಬಳಿಗೆ ಹೋಗಿ, ಯಾರಿಗೂ ಕಾಣದಂತೆ ಸರೋವರದ ಒಂದು ತಾವರೆದಂಟಿನೊಳಗೆ ಪ್ರವೇಶಿಸಿ ನೀರು ಹಾವಿನ ಹಾಗೆ ನೀರಿನಲ್ಲೇ ಸೇರಿದನು.

ಇಂದ್ರನು ಮಾಯವಾದುದರಿಂದ ಪ್ರಪಂಚವು ಅರಾಜಕವಾಯಿತು. ಆ ಸ್ಥಿತಿಯನ್ನು ನಿವಾರಿಸಲು ದೇವತೆಗಳೂ ಮುನಿಗಳೂ ಕೂಡಿ ಆಲೋಚನೆ ಮಾಡಿ, ಇಂದ್ರ ಪದವಿಯನ್ನು ನಿರ್ವಹಿಸಲು ತಕ್ಕವನು ನಹುಷ ಮಹಾರಾಜನೆಂದು ನಿರ್ಣಯಿಸಿ, ಅವನನ್ನು ಕರೆದು ತಂದು ಇಂದ್ರ ಪದವಿಯಲ್ಲಿ ಕೂಡಿಸಿದರು. ಅದುವರೆಗೆ ಮಹಾ ಧರ್ಮಾತ್ಮನೆಂದು ಖ್ಯಾತನಾಗಿದ್ದ ನಹುಷನಿಗೆ ಅಧಿಕಾರ ಮದ ತಲೆಗೇರಿ ಸ್ತ್ರೀ ವ್ಯಾಮೋಹವು ಕವಿಯಿತು. ಶಚೀದೇವಿ ತುಂಬಾ ಸುಂದರಿ ಎಂದು ತಿಳಿದು ಋಷಿಗಳನ್ನು ಕರೆದು, "ಈಗ ನಾನು ದೇವತೆಗಳ ರಾಜನಾಗಿದ್ದೇನೆ, ನಾನೇ ಇಂದ್ರ. ಹಾಗಿರುವಾಗ ನನ್ನನ್ನು ಸೇವಿಸಲು ಇಂದ್ರನ ಪತ್ನಿ ಬರಲಿ! ಅವಳನ್ನು ಕರೆಸಿರಿ!" ಎಂದನು.

ಋಷಿಗಳು ನಹುಷೇಂದ್ರನ ಮಾತು ಕೇಳಿ ಕಳವಳಪಡುತ್ತಾ ಹೋಗಿ ಶಚೀದೇವಿಯೊಂದಿಗೆ ಆ ಮಾತನ್ನು ಹೇಳಿದರು. ಶಚೀದೇವಿ ಬೃಹಸ್ಪತಿಯ ಮೊರೆಹೊಕ್ಕು ತನ್ನನ್ನು ಕಾಪಾಡಬೇಕೆಂದು ಬೇಡಿಕೊಂಡಳು. ಬೃಹಸ್ಪತಿ ಅವಳಿಗೆ ಅಭಯ ವಚನಗಳನ್ನು ಹೇಳಿದನು. ಅವನು ಹೇಳಿಕೊಟ್ಟ ಉಪಾಯದಂತೆ ಶಚೀದೇವಿ ಋಷಿಗಳೊಂದಿಗೆ ನಹುಷನ ಬಳಿಗೆ ಹೋದಳು.

ಅವಳು ನಹುಷನ ಮುಂದೆ ನಿಂತು, "ಕರೆದ ಮಾತಿಗೆ ಗೌರವ ಕೊಟ್ಟು ಬಂದೆನು. ನಿಮ್ಮ ಮನೋಗತವನ್ನೂ ಅರಿತಿದ್ದೇನೆ. ಆದರೆ ಗಂಡನ ಜಾಡು ತಿಳಿಯುವವರೆಗೂ ನಾನು ನಿಮ್ಮವಳಾಗಲು ಸಾಧ್ಯವಿಲ್ಲ. ಅದನ್ನು ತಿಳಿದ ಮೇಲೆ ನಾನು ಧೈರ್ಯದಿಂದ ನಿಮ್ಮನ್ನು ವರಿಸುತ್ತೇನೆ ಅದುವರೆಗೂ ತಾಳಬೇಕು." ಎಂದಳು ಶಚೀ.

ನಹುಷನು ಸರಿಯೆಂದು ಇಂದ್ರನನ್ನು ಹುಡುಕಿಸುವ ಏರ್ಪಾಡನ್ನು ಮಾಡಿದನು. ಅಷ್ಟರೊಳಗೆ ದೇವತೆಗಳು ವಿಷ್ಣುವಿನ ಬಳಿಗೆ ಹೋಗಿ, ಶಚೀದೇವಿಗೆ ಬಂದ ಇಕ್ಕಟ್ಟಿನ ಪರಿಸ್ಥಿತಿಯನ್ನು ಕುರಿತು ಹೇಳಿದರು.

"ನೀವು ಅಶ್ವಮೇಧ ಯಾಗವನ್ನು ಮಾಡಿ, ಜಗದಂಬೆಯನ್ನು ತೃಪ್ತಿಪಡಿಸುವುದು ಒಳ್ಳೆಯದು. ಆಗ ಇಂದ್ರನು ಮತ್ತೆ ಮೊದಲಿನಂತೆ ರಾಜನಾಗುತ್ತಾನೆ. ಶಚೀದೇವಿ ತನ್ನ ಗಂಡನೊಂದಿಗೆ ಸೇರುತ್ತಾಳೆ." ಎಂದನು ವಿಷ್ಣು.

ದೇವತೆಗಳು ಆಶಾವಾದಿಗಳಾಗಿ ನೀರಿನೊಳಗೆ ಸಂಚರಿಸಿಕೊಂಡಿದ್ದ ಇಂದ್ರನನ್ನು ಕರೆದುಕೊಂಡು ಹೋಗಿ ಅವನಿಂದ ಅಶ್ವಮೇಧ ಯಾಗವನ್ನು ಮಾಡಿಸಿದರು. ಆದರೂ ಅವನು ಅಮರಾವತಿಗೆ ಬಾರದಿರುವುದನ್ನು ನೋಡಿ ಶಚೀದೇವಿ ಗಂಡನು ಬಾರದಿರುವುದರ ಕಾರಣವನ್ನು ಬೃಹಸ್ಪತಿಯೊಡನೆ ಕೇಳಿದಳು. "ನೀನು ಮಹಾದೇವಿಯನ್ನು ಆರಾಧಿಸಿಕೊಂಡಿರು. ಎಲ್ಲಾ ಶುಭವಾಗುತ್ತದೆ." ಎಂದು ಹೇಳಿದನು ಬೃಹಸ್ಪತಿ.

ಅವಳು ಹಾಗೆಯೇ ದೇವಿಯನ್ನು ಆರಾಧಿಸಿಕೊಂಡಿರುವಾಗ, ದೇವಿ ಅವಳ ಮುಂದೆ ಪ್ರತ್ಯಕ್ಷಳಾಗಿ, "ಹೆದರಬೇಡ. ನಹುಷನಿಗೆ ಕಾಲ ಮೂಡಿತು. ಇಂದ್ರನ ಶಾಪ ಕಳೆಯಿತು. ನೀನೇ ನಿನ್ನ ಗಂಡನ ಬಳಿಗೆ ಹೋಗಿ ಉಪಾಯ ಕೇಳು. ಅವನು ಮಾನಸ ಸರೋವರದಲ್ಲಿ ಅಡಗಿಕೊಂಡಿದ್ದಾನೆ" ಎಂದಳು ದೇವಿ.

ಕೂಡಲೇ ಶಚಿ ಇಂದ್ರನ ಬಳಿಗೆ ಹೋಗಿ, ನಹುಷನಿಗೆ ತನ್ನ ಮೇಲೆ ಕಣ್ಣು ಬಿದ್ದ ಸಮಾಚಾರವನ್ನು ಹೇಳಿದಳು. "ಋಷಿಗಳು ಹೊತ್ತುಕೊಳ್ಳುವ ವಾಹನದಲ್ಲಿ ಕುಳಿತುಕೊಂಡು ನನ್ನ ಅಂತಃಪುರಕ್ಕೆ ಬಾ ಎಂದು ನಹುಷನಿಗೆ ಹೇಳಿ ಕಳುಹಿಸು. ಅಲ್ಲಿಗೆ ಅವನ ಇಂದ್ರ ಪದವಿ ಮುಗಿಯುತ್ತದೆ." ಎಂದು ಇಂದ್ರನು ಶಚಿಗೆ ಉಪಾಯ ಹೇಳಿದನು.

ಈ ಉಪಾಯ ನಾಟಿತು. ಶಚೀದೇವಿಯನ್ನು ತನ್ನ ಹೆಂಡತಿಯನ್ನಾಗಿ ಮಾಡಿಕೊಳ್ಳುವ ಆತುರದಲ್ಲಿ ನಹುಷನು ತನ್ನ ವಾಹನವನ್ನು ಸಪ್ತ ಋಷಿಗಳು ಹೊತ್ತು ಹೋಗಬೇಕೆಂದೂ, ಇತರ ಋಷಿಗಳು ಅವರೊಂದಿಗೆ ಬರಬೇಕೆಂದೂ ಋಷಿಗಳಿಗೆ ಹೇಳಿದನು. ಋಷಿಗಳು ಒಪ್ಪಿಕೊಂಡು ನಿಧಾನವಾಗಿ ನಡೆಯುವಾಗ ನಹುಷನು ಆತುರದಿಂದ, "ಸರ್ಪ! ಸರ್ಪ!" ಎನ್ನುತ್ತ ಗಿಡ್ಡನಾದ ಅಗಸ್ತ್ಯನ ತಲೆಗೆ ಒದೆದನು.

ಕೂಡಲೇ ಅಗಸ್ತ್ಯನು "ನೀನೇ ಸರ್ಪವಾಗು!" ಎಂದು ಶಪಿಸಿದ್ದೇ ತಡ, ನಹುಷನು ಹಾವಿನ ರೂಪ ಧರಿಸಿ ಭೂಮಿಗೆ ಬಿದ್ದನು. ಹೀಗೆ ಇಂದ್ರನು ಹೆಂಡತಿಯ ಪ್ರೇಮದಿಂದ, ದೇವತೆಗಳ ಒತ್ತಾಯದಿಂದ, ಚಿಂತೆ ಬಿಟ್ಟು ಮತ್ತೆ ಸ್ವರ್ಗಾಧಿಪತಿಯಾದನು.






ಒಂದು ಊರಿನಲ್ಲಿ ಪರಂಧಾಮಯ್ಯನೆಂಬ ಗೃಹಸ್ಥನಿದ್ದ. ದಿನನಿತ್ಯದ ಖರ್ಚಿಗೆ ಬೇಕಷ್ಟೇ ಸಂಪಾದನೆ ಮಾಡಿಕೊಂಡಿದ್ದ ಆತನು, ಒಂದು ಅಪಘಾತದಲ್ಲಿ ಅಕಸ್ಮಾತ್ತಾಗಿ ಸತ್ತು ಹೋಗಿ, ಆತನ ಹೆಂಡತಿಯೂ, ಹತ್ತು ವಯಸ್ಸಿನ ಮಗ ಗೋಪಾಲನೂ ಅನಾಥರಾಗಿ ಹೋದರು. ಇದ್ದುದೆಲ್ಲಾ ಒಂದು ಮನೆಯೂ ಒಂದು ಎಕರೆ ಹೊಲವೂ ಮಾತ್ರವೇ.

ಪರಂಧಾಮಯ್ಯನ ಆ ಒಂದೆಕರೆ ಹೊಲವು ಧನಂಜಯನೆಂಬ ದೊಡ್ಡ ಆಸ್ತಿವಂತನ ಹೊಲಗದ್ದೆಗಳ ಪಕ್ಕದಲ್ಲೇ ಇದ್ದಿತು. ಪರಂಧಾಮಯ್ಯ ಬದುಕಿರುವ ಕಾಲದಲ್ಲಿ ಅವನ ಸ್ವಂತ ತೋಳುಗಳ ಕಷ್ಟ ಕೃತದಲ್ಲಿ ಕಾಲಕ್ಷೇಪಮಾಡಿಕೊಂಡಿದ್ದ. ಈಗ ಪರಂಧಾಮಯ್ಯನ ಹೆಂಡತಿ ಅಸಹಾಯಕಳಾದಳು. ಈ ಸಂದರ್ಭದಲ್ಲಿ ಧನಂಜಯನು ಅವಳ ಒಂದೆಕರೆ ಹೊಲವನ್ನು, ಸಾಧಾರಣ ದರಕ್ಕಿಂತ ಹೆಚ್ಚೇ ಕೊಡುವೆನೆಂದು ಹೇಳಿ ನಂಬಿಸಿ ಮಾತು ಕೊಟ್ಟು, ಅದನ್ನು ಕೊಂಡು ಕೊಂಡು ತನ್ನದನ್ನಾಗಿ ಮಾಡಿಕೊಂಡನು.

"ನಿನ್ನ ಹೊಲಕ್ಕೆ ನಾನು ಕೊಡುವ ಐದು ಸಾವಿರವನ್ನು ನನ್ನ ಹತ್ತಿರವೇ ಇಟ್ಟುಕೊಂಡು, ಬಡ್ಡಿಗೆ ತಿರುಗಿಸಿ, ನಿನಗೆ ಬೇಕಾದಾಗ ಕೊಟ್ಟುಬಿಡುತ್ತೇನೆ. ನಿನ್ನ ಹತ್ತಿರ ಇದ್ದರೆ ನಿನ್ನನ್ನು ಯಾರಾದರೂ ಸುಲಭದಲ್ಲಿ ಮೋಸಪಡಿಸಿಬಿಡುತ್ತಾರೆ. ನಿನ್ನ ಮಗನಿಗೂ ಪ್ರಾಯ ಬರಲಿ" ಎಂದನು ಧನಂಜಯ.

ಪರಂಧಾಮಯ್ಯನ ಹೆಂಡತಿ ಅವನ ಮಾತುಗಳನ್ನು ನಂಬಿ, ಹಣವನ್ನು ಧನಂಜಯನ ಹತ್ತಿರವೇ ಬಿಟ್ಟಳು. ಅವಳು ಅಲ್ಲಿ ಇಲ್ಲಿ ಕೂಲಿನಾಲಿ ಮಾಡುತ್ತ ಮಗನನ್ನು ಓದಿಸಿ ಚೆನ್ನಾಗಿಯೇ ಬೆಳೆಸ ತೊಡಗಿದಳು. ಕಾಲಕ್ರಮದಲ್ಲಿ ಗೋಪಾಲನು ದೊಡ್ಡವನಾಗಿ, ನಗರಕ್ಕೆ ಹೋಗಿ ಹೆಚ್ಚಿನ ವಿದ್ಯೆಯನ್ನು ಕಲಿಯುವ ಅಭಿಲಾಷೆಯನ್ನು ತೋರಿಸಿದನು. ಅದಕ್ಕೆ ದೊಡ್ಡ ಮೊತ್ತದ ಹಣವು ಅಗತ್ಯವಾಗಿತ್ತು. ಆದುದರಿಂದ ಪರಂಧಾಮಯ್ಯನ ಹೆಂಡತಿ ಧನಂಜಯನ ಬಳಿಗೆ ಹೋಗಿ ಹಣವನ್ನು ಕೇಳಿದಳು.

"ಅದೆಲ್ಲಾ ಸರಿಯೇ. ಹೋಗಲಿ, ಕಲಿಯಲಿ. ಬೇಡೆಂದವರಾರು? ಹಣಕ್ಕೆ ಮಾತ್ರ ಬೇರೆಲ್ಲಿಯಾದರೂ ನೋಡಮ್ಮಾ!" ಎಂದನು ಧನಂಜಯ.

"ನೀವು ನಮಗೆ ಕೊಡಬೇಕಾದ ಹಣ ತಾನೇ ನಾನು ಕೇಳಿದೆ?" ಎಂದಳು ಪರಂಧಾಮಯ್ಯನ

ಜಿ. ಎ. ರಾವ್



ಪತ್ನಿ. ಧನಂಜಯನು ಆಶ್ಚರ್ಯ ನಟಿಸುತ್ತ, “ನಾನೇಕೆ ಹಣ ಕೊಡಬೇಕು? ನನ್ನ ಹತ್ತಿರ ಏನೋ ಕೊಟ್ಟು ಇಟ್ಟವಳ ಹಾಗೆ ಕೇಳುವೆಯಲ್ಲಾ? ” ಎಂದನು.

“ನಿಜಕ್ಕೂ ಕೊಟ್ಟು ಇಟ್ಟದ್ದೇನಲ್ಲ ಸ್ವಾಮಿ? ” ಎಂದು ಪರಂಧಾಮಯ್ಯನ ಪತ್ನಿ ಗಾಬರಿಯಾಗಿ ಹೇಳಿದಳು. ಎಷ್ಟೋ ಬಗೆಯಾಗಿ ಹೇಳಿ ನೋಡಿದಳು. ಯಾರೋ ಅವಳಿಗೆ ಮೋಸಮಾಡವನೆಂದು ಹೇಳಿದ ಧನಂಜಯನೇ ಮೋಸಮಾಡುತ್ತಿದ್ದಾನೆ! ಅವಳ ಬುದ್ಧಿಗೆ ಹುಚ್ಚು ಹಿಡಿಯುವದಷ್ಟೇ ಬಾಕಿ! ಮುಖ ಭಂಗಿತಳಾಗಿ ದೊಡ್ಡ ದುಃಖದಿಂದ ಹಿಂದಿರುಗಿದಳು.

ಈ ವಿಷಯವನ್ನು ತಿಳಿದು ಗೋಪಾಲನು ಕಿಡಿಕಿಡಿಯಾದನು. “ಇವನನ್ನು ನಂಬಿ ಹಣ ವಿಟ್ಟುಕೊಳ್ಳಲು ಬಿಟ್ಟದ್ದು ನಮ್ಮದೇ ತಪ್ಪು. ಇವನಿಗೆ ಸರಿಯಾದ ಬುದ್ಧಿ ಕಲಿಸಿಯೇ ತೀರಬೇಕು!” ಎಂದನು.

ಗೋಪಾಲನಿಗೆ ಅನಂತನೆಂಬ ಸ್ನೇಹಿತನೊಬ್ಬನಿದ್ದ. ಆನಂತನ ತಂದೆ ಸ್ವರ್ಣಕಾರ ವೃತ್ತಿಯವನಾಗಿದ್ದನು. ಅವನಿಗೆ ಊರೊಳಗಿನ ಎಲ್ಲರ ಹತ್ತಿರವೂ ಒಳ್ಳೆಯ ಪರಿಚಯವೂ, ಒಳ್ಳೆಯ ಹೆಸರೂ ಇದ್ದಿತು. ಗೋಪಾಲನು ನಡೆದ ಸಂಗತಿಯನ್ನೆಲ್ಲಾ ಅನಂತನ ತಂದೆಯೊಂದಿಗೆ ಹೇಳಿ, ಇಬ್ಬರೂ ಒಂದು ಉಪಾಯ ಯೋಚಿಸಿಕೊಂಡರು. ಆ ಮೇಲೆ ಸ್ವರ್ಣಕಾರನು ಕೊಟ್ಟ ಕೆಲವು ಹಳೆಯ ನಗಗಳನ್ನು ತೆಗೆದುಕೊಂಡು ಗೋಪಾಲನು ಅಲ್ಲಿಂದ ಹಿಂದಿರುಗಿದನು.

ದಿನಾ ಸಾಯಂಕಾಲದ ಹೊತ್ತಿನಲ್ಲಿ ಧನಂಜಯನ ಬಳಿಗೆ ಊರೊಳಗಿನ ಕೆಲಮಂದಿ ದೊಡ್ಡ ಮನುಷ್ಯರು ಬಂದು ಚಾವಡಿಯಲ್ಲಿ ಲೋಕಾಭಿರಾಮವಾಗಿ ಮಾತಾಡುತ್ತಿರುತ್ತಾರೆ. ಅಂತಹ ಸಮಯದಲ್ಲಿ ಗೋಪಾಲನು ನಗಗಳೊಂದಿಗೆ ಅಲ್ಲಿಗೆ ಹೋದನು.

ಗೋಪಾಲನನ್ನು ನೋಡಿ ಧನಂಜಯನಿಗೆ “ಕಳ್ಳನ ಜೀವ ಹುಳ್ಳ ಹುಳ್ಳಗೆ” ಎಂಬಂತೆ ಜುಪ್ಪೆನಿಸಿತು. ಹತ್ತುಮಂದಿಗಳ ಮುಂದೆ ಅವನು ಹಣದ ವಿಷಯ ಕೇಳಿ ತನ್ನನ್ನು ತರಾಟೆಗೆ ತೆಗೆದುಕೊಳ್ಳುತ್ತಾನೇನೋ! ಆದರೆ ಗೋಪಾಲನು ಆ ಸಂಗತಿಯನ್ನೇ ಎತ್ತದೆ, ನಗಗಳನ್ನು ಧನಂಜಯನಿಗೆ ತೋರಿಸಿ, “ಇವು ನನ್ನ ತಾಯಿಯ ಹಳೆಯ ನಗಗಳು. ನನಗೆ ಈಗ ಹಣದ ಆಗತ್ಯವಿದ್ದುದರಿಂದ ಇವುಗಳನ್ನು ನಿಮ್ಮ ಹತ್ತಿರ ಅಡವಿಟ್ಟು, ನನ್ನ ಓದಿಗಾಗಿ ಸ್ವಲ್ಪ ಹಣ ನಿಮ್ಮಿಂದ ಸಾಲ ಪಡೆಯುವಾ ಅಂತ ಬಂದೆ. ಕೊಡುವಿರಾ ಸ್ವಾಮಿ? ” ಎಂದು ಕೇಳಿದನು.

ನಗಗಳನ್ನು ನೋಡಿ ಧನಂಜಯನ ಕಣ್ಣುಗಳು ಹೊಳೆದುವು. ಎಲ್ಲ ಅಚ್ಚ ಬಂಗಾರದ ನಗಗಳು. ತುಂಬಾ ಬೆಲೆ ಬಾಳುವಂಥವು. ಎಷ್ಟೋ ಇಷ್ಟು ಗೋಪಾಲನ ಕೈಗೆ ಹಾಕಿ, ದಕ್ಕಿಸಿಕೊಳ್ಳಬಹುದೆಂದು ಆಶೆಯುಂಟಾಯಿತು ಧನಂಜಯನಿಗೆ. “ಹಾಗೇನು? ಓದಿಗಾಗಿ ಹಣ ಕೇಳುವಿಯಾದುದರಿಂದ ಎಷ್ಟು ಬೇಕು ಕೇಳು ಕೊಡುತ್ತೇನೆ. ಚೆನ್ನಾಗಿ ಓದಿ ಮುಂದಕ್ಕೆ ಬಾರಪ್ಪ ” ಎಂದು ಧನಂಜಯನು ಎಲ್ಲರ ಮುಂದೂ

ತನ್ನ ಉದಾರತೆಯನ್ನು ಪ್ರದರ್ಶಿಸಿದನು. "ಐನೂರು ಕೊಟ್ಟರೆ ಸಾಕು ಸ್ವಾಮಿ" ಎಂದ ಗೋಪಾಲ. ಧನಂಜಯನು ನಗಗಳನ್ನು ಒಳಗಿಟ್ಟು ಹಣವನ್ನು ಕೊಟ್ಟು ಗೋಪಾಲನನ್ನು ಕಳುಹಿಸಿದನು.

ಮಾರಣೇ ದಿನ ಧನಂಜಯನು ಅನಂತನ ತಂದೆಯನ್ನೇ ತನ್ನ ಮನೆಗೆ ಕರೆಯಿಸಿ, ಆ ನಗಗಳ ನಾಣ್ಯತೆಯನ್ನು ಪರೀಕ್ಷೆಮಾಡಿ ನೋಡುವಂತೆ ಹೇಳಿದನು. ಸ್ವರ್ಣಕಾರನು ಆ ನಗಗಳನ್ನು ಕೈಯಲ್ಲೆತ್ತಿ ಹಾಗೆ ಹೀಗೆ ನೋಡುತ್ತ, "ಇವು ನಮ್ಮ ಜಮಿಾನ್ದಾರ್ರ ನಗಗಳ ಹಾಗಿವೆಯಲ್ಲಾ! ಹಾಗಿರುವುದೇನು? ಜಮಿಾನ್ದಾರರವೇ ನಗಗಳು! ನಾನು ಮಾಡಿದ ಮುದ್ರೆ ಇವುಗಳಲ್ಲಿದೆ. ತುಂಬಾ ದಿನಗಳ ಕೆಳಗೆ ನಾನೇ ಮಾಡಿ ಕೊಟ್ಟ ನಗಗಳಿವು! ಅಂದ ಹಾಗೆ–" ಎಂದು ಪಿಸು ಮಾತಿನಿಂದ, "ನಾಲ್ಕು ದಿನಗಳ ಕೆಳಗೆ ಜಮಿಾನ್ದಾರ್ರ ಮನೇಲಿ ನಗಗಳು ಕಳುವಾದುವಂತೆ. ಇವು ನಿಮ್ಮ ಹತ್ತಿರ ಹೇಗೆ ಬಂತೋ? ಯಾರೋ ಕೊಟ್ಟಿರಬೇಕು. ಇಂಥಾ ಕಳ್ಳ ಸೊತ್ತು ನಿಮ್ಮಂಥವರ ಮನೆಯಲ್ಲಿರಲೇ ಬಾರದು ಸ್ವಾಮಿ. ನಾನು ಈ ಸುದ್ದಿ ಉಸಿರೆತ್ತಲಾರೆ. ಇದನ್ನು ಕೊಟ್ಟವರಿಗೇ ತಿರುಗಿ ಕೊಟ್ಟು ಕೈ ತೊಳೆದು ಕೊಳ್ಳಿ, ಇಲ್ಲದಿದ್ದರೆ ತೊಂದರೆ!" ಎಂದನು.

ಆ ಮಾತನ್ನು ಕೇಳುತ್ತಿದ್ದಂತೆ ಧನಂಜಯನ ಪ್ರಾಣವು ನೆತ್ತಿಯಿಂದಲೇ ಹೋಗುವಂತಾಯಿತು. ಸ್ವರ್ಣಕಾರನು ಹೊರಟು ಹೋದ ಮೇಲೆ ಗೋಪಾಲನನ್ನು ಕರೆ ಕಳುಹಿಸಿ ಬರಮಾಡಿ, "ನನಗೆ ಅಗತ್ಯವಾಗಿ ಹಣ ಬೇಕಾಗಿದೆ. ನಿನ್ನ ನಗಗಳನ್ನು ವಾಪಾಸು ತೆಗೆದುಕೊಂಡು ನನ್ನಿಂದ ಪಡೆದ ಹಣವನ್ನು ಕೊಟ್ಟು ಬಿಡು. ಬಡ್ಡಿ ಗಿಡ್ಡೀ ಏನೂ ಬೇಡ. ಬೇರೆಲ್ಲಿಂದಾದರೂ ಸಾಲ ತಕೋ. ನಗಗಳಿಗೆ ಯಾರೂ ಸಾಲಕೊಟ್ಟಾರು" ಎಂದು ನಗಗಳನ್ನು ಅವನ ಮುಂದಿಟ್ಟನು.

ಗೋಪಾಲನು ನಗಗಳನ್ನು ಎತ್ತಿಕೊಂಡು, "ಹಣದಲ್ಲಿ ಬಹಳ ಭಾಗ ಖರ್ಚುಮಾಡಿಬಿಟ್ಟೆನಲ್ಲಾ! ಲೆಕ್ಕ ನೋಡಿ ಇದ್ದುದನ್ನು ತಂದು ಕೊಡುತ್ತೇನೆ. ಉಳಿದದ್ದು ಮೂರು ದಿನಗಳಲ್ಲಿ ಕೊಡುತ್ತೇನೆ" ಎಂದನು. ಧನಂಜಯನಿಗೆ ಮೊದಲು ಆ ನಗಗಳು ತನ್ನ





ಮನೆಯಿಂದ ಹೋದರೆ ಸಾಕಾಗಿತ್ತು. "ಹಾಗೇ ಮಾಡಪ್ಪ" ಎಂದು ಸಮ್ಮತಿಸಿದನು.

ಆ ಮೇಲೆ ಎಂಟು ದಿನಗಳು ಕಳೆದುವು. ಧನಂಜಯನು ಹತ್ತುಮಂದಿ ದೊಡ್ಡ ಮನುಷ್ಯರ ಜತೆಯಲ್ಲಿ ಮಾತಾಡಿಕೊಂಡು ಚಾವಡಿಯಲ್ಲಿರುವಾಗ, ಗೋಪಾಲನು ಅಲ್ಲಿಗೆ ಬಂದು, "ನಿಮ್ಮ ಹಣ ತಂದಿದ್ದೇನೆ ಸ್ವಾಮಿ. ಇದನ್ನು ತೆಗೆದುಕೊಂಡು ನನ್ನ ನಗಗಳನ್ನು ಕೊಟ್ಟುಬಿಡಿರಿ" ಎಂದನು.

ಧನಂಜಯನು ಕ್ಷಣಕಾಲ ಗಾಬರಿಯಾಗಿ, ಸಮಾಳಿಸಿಕೊಂಡು, "ನೀನು ಕೊಟ್ಟ ನಗಗಳನ್ನೆಲ್ಲಾ ಆಗಲೇ ಕೊಟ್ಟುಬಿಟ್ಟೆನಲ್ಲಾ? ಏನೂ ತಿಳಿಯದಂತೆ ಕೇಳುತ್ತಿರುವೆಯಾ?" ಎಂದನು.

ಗೋಪಾಲನು ಆಶ್ಚರ್ಯ ನಟಿಸುತ್ತ, "ಆ ನಗಗಳನ್ನು ನಾನು ಯಾವಾಗ ತೆಗೆದುಕೊಂಡೆ? ನಿಮ್ಮ ಹತ್ತಿರ ಹಣ ಪಡೆದ ಮರುದಿನವೇ ನಾನು ನಗರಕ್ಕೆ ಹೋಗಿ ಈ ದಿನವೇ ಬರುತ್ತಿದ್ದೇನೆ. ನಾನು ಊರಲ್ಲೇ ಇರಲಿಲ್ಲವಲ್ಲಾ? ಐದು ಸಾವಿರ ಬೆಲೆಯ ನಗಗಳು! ಇದಕ್ಕಿಂತ ಘೋರ ಅನ್ಯಾಯವಿದೆಯೇ ನೀವೇ ಹೇಳಿ!" ಎಂದು ಅಲ್ಲಿರುವ ದೊಡ್ಡ ಮನುಷ್ಯರನ್ನು ನೋಡಿದನು.

ಆ ದೊಡ್ಡ ಮನುಷ್ಯರೇ ಗೋಪಾಲನಿಗೆ ಸಾಕ್ಷಿಗಳು! ತಾನು ಮೊದಲು ಗೋಪಾಲನಿಗೆ ಹಣ ಕೊಟ್ಟಿರುವುದನ್ನು ಈ ಸಾಕ್ಷಿಗಳು ನೋಡಿದ್ದಾರೆಂದು ಧನಂಜಯನಿಗೆ ನೆನಪಾಗಿ ನಡುಗಿದನು. ಹಣ ಎಲ್ಲಿಗೂ ಹೋಗುವುದಿಲ್ಲವೆಂಬುದಕ್ಕೆ ಈ ದೊಡ್ಡ ಮನುಷ್ಯರ ಸಾಕ್ಷಿಯಿದೆ ಎಂದುಕೊಂಡರೆ, ಅದೀಗ ತನಗೇ ಇದಿರಾಗುವುದೆಂದು ಅವನೇನು ಕಂಡ?

"ಇದೆಂಥ ಮರೆವಯ್ಯಾ ಧನಂಜಯನವರೆ? ಈ ಹುಡುಗ ನಿಮ್ಮ ಹತ್ತಿರ ನಗ ಅಡವಿಟ್ಟದ್ದನ್ನು ನಾವೆಲ್ಲಾ ನೋಡಿದ್ದೇವಷ್ಟೆ? ಅವನೀಗ ಹಣ ತಂದು ನಗಗಳನ್ನು ತಿರುಗಿ ಕೇಳುವುದು ನ್ಯಾಯ ತಾನೆ? ನಿಮ್ಮ ಮಾತು ಯಾರು ತಾನೇ ನಂಬುತ್ತಾರೆ?" ಎಂದನು ಒಬ್ಬ ದೊಡ್ಡ ಮನುಷ್ಯ.

ಧನಂಜಯನು ತಾಳ್ಮೆ ತಪ್ಪಿ, "ಅವೆಲ್ಲಾ ಕಳ್ಳತನದ ನಗಗಳು! ಈ ಹುಡುಗ ಹೇಗೋ ಅವುಗಳನ್ನು ಕದ್ದು ನನ್ನ ಹತ್ತಿರ ಅಡವಿಟ್ಟಿದ್ದಾನೆ. ಈ ಸಂಗತಿ ಗೊತ್ತಾದ ಕೂಡಲೇ ನಾನು ಅವುಗಳನ್ನೆಲ್ಲ ಇವನಿಗೇ ವಾಪಾಸು ಕೊಟ್ಟೆ" ಎಂದನು.

ಎಲ್ಲರೂ ಗೋಪಾಲನ ಕಡೆಗೆ ಅನುಮಾನದಿಂದ ನೋಡಿದರು. ಅದೇ ಸಮಯಕ್ಕೆ ಅನಂತನ ತಂದೆ ಸ್ವರ್ಣಾಚಾರಿ ಅಲ್ಲಿಗೆ ಬಂದು, ಧನಂಜಯನಿಗೆ ಕೈಮುಗಿದು ನಿಂತನು. "ಏನು ಬಂದೆ?" ಎಂದು ಧನಂಜಯನು ಕೇಳಲು, ಸ್ವರ್ಣಕಾರನು, "ಆ ನಗಗಳ ಮಜೂರಿ ಸಂಜೆ ಮನೆಗೆ ಬಂದು ತೆಗೆದುಕೋ ಅಂದಿರಲ್ಲಾ?" ಎಂದನು ಹಲ್ಲು ಗಿಂಜುತ್ತ. ಧನಂಜಯನು ಅವನನ್ನು ಕೆಂಗಣ್ಣಿನಿಂದ ನೋಡುತ್ತ, "ಎಂಥ ನಗಗಳು? ಎಂಥ ಮಜೂರಿ?" ಎಂದು ಅರಚಿದನು.

" ಏನೋ ಬಹಳ ಕೋಪಪಡುವ ಹಾಗಿದೆಯಲ್ಲಾ? ತಮ್ಮ ಹಳೆಯ ನಗಗಳನ್ನು ಕರಗಿಸಿ ಹೊಸ ನಗಗಳನ್ನು ಮಾಡಿಕೊಟ್ಟೆನಲ್ಲಾ? ಅವುಗಳ ಮಜೂರಿಯನ್ನು ಈ ದಿನ ಮನೆಗೆ ಬಂದು ತೆಗೆದುಕೋ ಅಂತ ಹೇಳಿದಿರಲ್ಲಾ? ಮರೆತುಬಿಟ್ಟಿರಾ? " ಎಂದನು ಅನಂತನ ತಂದೆ.

ಈ ಮಾತು ಕೇಳಿ ಧನಂಜಯನಿಗೆ ಹುಚ್ಚು ಹತ್ತಿಕೊಳ್ಳುವುದೊಂದೇ ಬಾಕಿ! ನಡೆದ ಮೋಸವೇನೆಂಬುದು ಅರ್ಥವೂ ಆಯಿತು. ಆದರೆ ಏನು ತಾನೇ ಮಾಡಬಲ್ಲನು? ಈ ಸ್ವರ್ಣಕಾರನೇ ಅವು ಕಳುವಿನ ನಗಗಳೆಂದು ಹೆದರಿಸಿ ಗೋಪಾಲನಿಗೆ ಹಿಂದಿರುಗಿ ಕೊಡಿಸಿದನೆಂದು ಹೇಳಿದರೆ, ಯಾರೂ ನಂಬಲಾರರು. ಸ್ವರ್ಣಕಾರನಿಗೆ ಸಿಗುವ ಮಜೂರಿಯನ್ನು ಹಾರಿಸಿಕೊಳ್ಳಲು ತಾನು ತಂತ್ರಮಾಡುವೆನೆಂದು ಹೇಳಿಕೊಳ್ಳುವರು.

ಧನಂಜಯನು ಮಾತಾಡದಿರುವುದನ್ನು ನೋಡಿ, ಗೋಪಾಲನು ತಮ್ಮೆಲ್ಲರ ಇದಿರಿನಲ್ಲಿ ಕೊಟ್ಟ ಹಳೆಯ ನಗಗಳನ್ನು ಧನಂಜಯನು ಸ್ವರ್ಣಕಾರನ ಮೂಲಕ ಕರಗಿಸಿ ಹೊಸ ನಗಗಳನ್ನು ಮಾಡಿಸಿಕೊಂಡನೆಂದು ಅಲ್ಲಿದ್ದವರೆಲ್ಲ ನಂಬಿಬಿಟ್ಟರು.

" ಛೆಛೆ! ನಿಮ್ಮನ್ನು ಏನೋ ಅಂದುಕೊಂಡೆವು! ದೊಡ್ಡತನದವರೆಂದು ಗೌರವ ಕೊಟ್ಟೆವು! ಈ ಬಗೆಯ ಮೋಸಮಾಡುವವರೆಂದು ಈಗಷ್ಟೇ ಗೊತ್ತಾಯಿತು. ಹೋಗಲಿಬಿಡಿ. ಆ ಹುಡುಗ ಕೊಟ್ಟ ನಗಗಳನ್ನು ವಾಪಾಸು ಕೊಡಬಹುದಲ್ಲ? ಅವುಗಳನ್ನು ಕರಗಿಸಿ ಹೊಸ ನಗಗಳನ್ನು ಮಾಡಿಸಿದರೂ, ಮಾಡಿದವನೂ ಸಹ ಇಲ್ಲೇ ಇರುವುದರಿಂದ, ತಾನು ಮಾಡಿದ ನಗಗಳನ್ನು ಅವನೇ ಗುರುತು ಹೇಳುತ್ತಾನೆ." ಎಂದರು ದೊಡ್ಡ ಮನುಷ್ಯರು.

ಧನಂಜಯನಿಗೆ ತಲೆಯೆತ್ತಲಾಗದಂತಾಯಿತು. ತನ್ನ ಹಣದ ಆಶೆ ಇಷ್ಟೊಂದು ಮರ್ಯಾದೆ ತೆಗೆಯುವುದೆಂದು ಅವನು ಕನಸಿನಲ್ಲಿಯೂ ಊಹಿಸಿರಲಿಲ್ಲ. ಈಗ ನಗಗಳನ್ನು ಎಲ್ಲಿಂದ ತರುವುದು ?

ಗೋಪಾಲನಿಗೆ ಧನಂಜಯನ ಪರಿಸ್ಥಿತಿ ನೋಡಿ ಕನಿಕರ ಮೂಡಿತು. " ಹೋಗಲಿ ಬಿಡಿ ಸ್ವಾಮಿ. ಇವರೇನೋ ತುಂಬಾ ಇಷ್ಟಪಟ್ಟು ಮಾಡಿಸಿಕೊಂಡ ನಗಗಳು ನನಗೆ ಬೇಡ. ಆ ಬಂಗಾರದ ಬೆಲೆ ಕೊಟ್ಟುಬಿಡಿರಿ, ಸಾಕು. ನಗಗಳನ್ನು ಮಾಡಿದವರು ಇಲ್ಲೇ ಇದ್ದಾರಲ್ಲ? ಅದರ ಬೆಲೆ ಅವರೇ ಹೇಳುತ್ತಾರೆ" ಎಂದನು.

ಕಡೆಗೆ ಧನಂಜಯನು ಗೋಪಾಲನಿಗೆ ಆರು ಸಾವಿರ ರೂಪಾಯಿಗಳನ್ನು ಕೊಟ್ಟು, ಬಡ್ಡಿಯೊಂದಿಗೆ ಋಣಮುಕ್ತನಾದಂತೆ ಆಯಿತು. ವ್ಯರ್ಥವಾಗಿ ಸ್ವರ್ಣಕಾರನ ಕೂಲಿಯ ಹಣವೂ ಸಂದಿತು. ಧನಂಜಯನ ಗೌರವ ಮಣ್ಣುಗೂಡಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೦ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**



P. Balasubramanian





Pranlal K. Patel

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಏಪ್ರಿಲ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಫೆಬ್ರವರಿ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಜಾರಿದರೆ ಮೇಲಕ್ಕೆ**

ಎರಡನೇ ಫೋಟೋ: **ತಪ್ಪಿದರೆ ನೆಲಕ್ಕೆ!**

ಕಳುಹಿಸಿದವರು: ಪಿ. ಎಸ್. ಬಡಿಗೇರ,

ಹಿರೇಬಾಗೇವಾಡಿ, ಬೆಳಗಾಂವ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.


ಮಕ್ಕಳ ಸಂತೋಷ
ಕೂಟ ಭರದಿಂದ ಸಾಗುತ್ತದೆ


ಒಂದು ಪುಟಾಣಿ ಮಗು
ನಿದ್ರಿಸಿ, ಕನಸು
ಕಾಣುತ್ತದೆ...


ನ್ಯೂಟ್ರಿನ್ ಮೊಲ ಮತ್ತು
ಪುಟಾಣಿ ಮಗು ಆಳವಾದ
ಕಡಲಿನಲ್ಲಿ ಒಡೆದ
ಹಡಗನ್ನು ಪರಿಶೋಧಿಸುತ್ತಿದ್ದಾರೆ.


ಒಂದು ಭಾರಿ ನಿಧಿಯನ್ನು
ಅವರು ಪತ್ತೆಹಚ್ಚಿದರು.
"ಯುರೇಕ!
ಸಿಕ್ಕಿತು. ನನಗೇನು
ಸಿಕ್ಕಿದೆ ನೋಡಿ"


ನ್ಯೂಟ್ರಿನ್ ಚೀಲಗಳನ್ನು ಅವರು
ಸಾಗಿಸುತ್ತಿರುವಾಗ...


ಮೊಲ, ವೀರೋಚಿತವಾಗಿ,
ಶಾರ್ಕ್ ಮೀನಿನ ತೆರೆದ
ಬಾಯಿಯೊಳಕ್ಕೆ
ಮಿಠಾಯಿಗಳ
ಚೀಲವೊಂದನ್ನು ಎಸೆಯುತ್ತದೆ


ಮೊಲ ಮತ್ತು ಪುಟಾಣಿ ಮಗು
ರಭಸದಿಂದ ಓಡುತ್ತಾರೆ...


ಥಟಕ್ಕನೆ...
"ಹೇ! ಎಳು!"


ನ್ಯೂಟ್ರಿನ್‌ನ ಮಧುರ
ರುಚಿಯನ್ನು ಸವಿಯಿರಿ!